# ಹಳ್ಳಿಯ ಕಥೆಗಳು

ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ.



ಸತ್ಯಶೋಧನ ಪ್ರಕಟನ ಮಂದಿರ
ಕೋಟೆ, ಬೆಂಗಳೂರು ನಗರ
೧೯೩೩

# ಳ್ಳಿಯ ಕಥೆಗಳು

—o—

ಲೇಖಕರು

**ವೆಂಕಟರಾಮಯ್ಯ, ಎಂ.ಎ., ಎಲ್ಎಲ್.ಬಿ.,**

ೈಸೂರು ಸರಕಾರದ ಕನ್ನಡ ಟ್ರ್ಯಾನ್ಸ್ಲೇಟರು.

ತೃತೀಯ ಮುದ್ರಣ

ಮುದ್ರಣಕಾರರು

ಶ್ರೀನಿವಾಸಯ್ಯಂಗಾರ್, ಬೆಂಗಳೂರು ಸಿಟಿ

೧೯೩೩

[ಬೆಲೆ ೮ ಆಣೆ]

# ಮೊದಲನೆಯ ಮುದ್ರಣದ ಪ್ರಸ್ತಾವನೆ

—————o—————

ಹಳ್ಳಿಯವರ ನಡೆನುಡಿಗಳನ್ನು ಸ್ವಲ್ಪಮಟ್ಟಿಗೆ ಚಿತ್ರಿಸಿ ತೋರಿಸುವ ಐದು ಕಥೆಗಳು ಈ ಪುಸ್ತಕದಲ್ಲಿವೆ ಕೃಷ್ಣಪ್ಪನೆಂಬ ಹೆಸರಿನ ಹಳ್ಳಿಯವನೊಬ್ಬನು ಹೇಳುವಂತೆ ಈ ಕಥೆಗಳನ್ನು ಬರೆದಿದ್ದೇನೆ ಗ್ರಾಮಾಂತರದಲ್ಲಿ ವಾಸಮಾಡುವ ನಮ್ಮ ದೇಶಬಾಂಧವರು ವಿದ್ಯೆಯಲ್ಲಿ ಹಿಂದೆ ಬಿದ್ದಿದ್ದರೂ, ಅವರಲ್ಲಿ ಅನೇಕರು ಸದ್ಗುಣಭರಿತರಾಗಿದ್ದಾರೆಂಬುದನ್ನೂ, ಅವರಲ್ಲಿ ಅನೇಕರಲ್ಲಿ ಉತ್ತಮ ವಿಧದ ಸಂಸ್ಕೃತಿಯುಂಟೆಂಬುದನ್ನೂ ತೋರಿಸಿ ಕೇವಲ ಸಹಾನುಭೂತಿಯಿಂದ ಯಥಾಮತಿಯಾಗಿ ಅಲ್ಲಿಯ ಸಮಾಜವನ್ನು ಚಿತ್ರಿಸಿದ್ದೇನೆ ಹೀಗೆಂದ ಮಾತ್ರವೇ, ನೀತಿಯನ್ನು ಬೋಧಿಸುವ ಅಭಿಪ್ರಾಯದಿಂದಲೇ ಈ ಕಥೆಗಳನ್ನು ಬರೆದಿದ್ದೇನೆಂಬುದಾಗಿ ಯಾರೂ ಭಾವಿಸಬಾರದು ಅಂತಹ ಆಶಯವೇ ನನಗಿಲ್ಲ ಕಾಗದದ ದೋಣಿಗಳನ್ನು ನೀರಿನಮೇಲೆ ಬಿಟ್ಟು ಆನಂದಿಸುವ ಬಾಲಕರಂತೆ, ಕೇವಲ ನನ್ನ ಸಂತೋಷಕ್ಕೋಸ್ಕರವೇ, ನಾನು ಇವುಗಳನ್ನು ಬರೆದಿದ್ದೇನೆ ಅಲ್ಲದೆ, ನಾನು ಬರೆದುದನ್ನು ಭಕ್ತಿಯಿಂದ ಕನ್ನಡಿಗರ ಪದತಲದಲ್ಲಿ ಸಮರ್ಪಿಸಿದ್ದೇನೆ ನನ್ನ ಈ ಅಲ್ಪ ಸೇವೆಯನ್ನು ಅವರು ಸ್ವೀಕರಿಸಿ ಅನುಗ್ರಹಿಸಿದರೆ, ನಾನು ಧನ್ಯನೆಂದು ಭಾವಿಸುವೆನು

ನಾನು ಕಥೆಗಳನ್ನು ಬರೆಯುವಂತೆ ಮೊಟ್ಟಮೊದಲು ಪ್ರೇರಿಸಿ ಪ್ರೋತ್ಸಾಹಪಡಿಸಿದವರು ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಎ ಆರ್ ಕೃಷ್ಣಶಾಸ್ತ್ರಿಗಳು ಆ ಕಾರಣ ಅವರಿಗೆ ನಾನು ವಿಶೇಷ ಕೃತಜ್ಞನಾಗಿದ್ದೇನೆ ಆ ಬಳಿಕ ನನ್ನ ಪ್ರಥಮ ಪ್ರಯತ್ನ ರೂಪವಾಗಿ "ನೀನೇ ಮುದ್ದು ಕೃಷ್ಣ" ಎಂಬ ಹೆಸರಿನ ಒಂದು ಕಥೆಯನ್ನು ಬರೆದೆನು ಅದು ಇನ್ನೂ ಅಪೂರ್ಣವಾಗಿದ್ದಾಗಲೇ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು (ಕನ್ನಡಿಗರಿಗೆ ಚಿರಪರಿಚಿತರಾಗಿ ಸುಪ್ರಸಿದ್ಧರಾಗಿರುವ ಶ್ರೀನಿವಾಸರು) ಆದರದಿಂದ ಅದನ್ನು ಓದಿಸಿ ಕೇಳಿ ಬಹುವಾಗಿ ಸಂತೋಷಿಸಿ ಉಪಕರಿಸಿದರು. ಅಷ್ಟೇ ಅಲ್ಲ, ಅದನ್ನು ಪೂರ್ತಿಗೊಳಿಸಿ ಅದರ ಜೊತೆಗೆ ಮತ್ತೆ ಕೆಲವು ಕಥೆಗಳನ್ನು ಬರೆದು ಅಚ್ಚುಹಾಕಿಸಿಯೇ ತೀರಬೇಕೆಂದು ಪ್ರೀತಿ

ಯಿಂದ ತಿಳಿಸಿದರು. ಇದಕ್ಕಾಗಿ ನಾನು ಅವರಿಗೆ ವಿಶೇಷ ಕೃತಜ್ಞನಾಗಿದ್ದೇನೆ. ಆ ಕಥೆಯು ಅಚ್ಚಾದಮೇಲೆ ಶ್ರೀಮಾನ್ ಎನ್. ಎಸ್. ಸುಬ್ಬರಾಯರು, ಶ್ರೀಮಾನ್ ವಿ. ಸುಬ್ರಹ್ಮಣ್ಯ ಅಯ್ಯರವರು, ಶ್ರೀಮಾನ್ ಬಿ. ಎಂ ಶ್ರೀಕಂಠಯ್ಯನವರು, ಶ್ರೀಮಾನ್ ಬಿ. ಪುಟ್ಟಯ್ಯನವರು, ಶ್ರೀಮಾನ್ ಎಸ್. ಜಿ ಶಾಸ್ತ್ರಿಗಳವರು, ಶ್ರೀಮಾನ್ ಬೆಳ್ಳಾವೆ ವೆಂಕಟನಾರಣಪ್ಪನವರು, ಶ್ರೀಮಾನ್ ಎಚ್ ಎಂ ಕೃಷ್ಣ ಸ್ವಾಮಿಯವರು, ಶ್ರೀಮಾನ್ ಎ ಎನ್ ನರಸಿಂಹಯ್ಯನವರು, ಶ್ರೀಮಾನ್ ಎಚ್ ಯೋಗನರಸಿಂಹಂ ಅವರು, ಶ್ರೀಮಾನ್ ದೇವುಡು ನರಸಿಂಹ ಶಾಸ್ತ್ರಿಗಳವರು ಮುಂತಾದ ಹಿರಿಯರೂ ಮಿತ್ರರೂ ಅದನ್ನು ಅಭಿನಂದಿಸಿ ನನಗೆ ಮಹೋಪಕಾರ ಮಾಡಿದರು. ಇದರಿಂದ ಉತ್ತೇಜಿತನಾಗಿ ಈ ಐದು ಕಥೆಗಳನ್ನೂ ಬರೆದೆನು ಅವು ಗಳಲ್ಲಿ ಮೊದಲನೆಯದಕ್ಕೆ ಮಾತ್ರ, ಪ್ರಖ್ಯಾತನಾದ ಫ್ರೆಂಚ್ ಲೇಖಕನೊಬ್ಬನು ಬರೆ ದಿರುವ ಒಂದು ಕಥೆಯು ಸ್ವಲ್ಪಮಟ್ಟಿಗೆ ಆಧಾರವಾಗಿದೆ ಒಡವೆಯ ಆಸೆಗೊಳಗಾದ ಸ್ತ್ರೀಯೊಬ್ಬಳು ಕಷ್ಟಕ್ಕೆ ಗುರಿಯಾದ ಬಗೆಯನ್ನು ಮಾತ್ರ ಅಲ್ಲಿಂದ ತೆಗೆದುಕೊಂಡು ನಮ್ಮ ದೇಶಕ್ಕೂ ನಮ್ಮ ಸಮಾಜಕ್ಕೂ ಸರಿಹೋಗುವ ಸನ್ನಿವೇಶಗಳನ್ನು ಕಲ್ಪಿಸಿ ಆ ಕಥೆಯನ್ನು ಬರೆದಿದ್ದೇನೆ ಈ ಐದು ಕಥೆಗಳನ್ನೂ ಆದರದಿಂದ ಓದಿಸಿ ಕೇಳಿ, ಇವುಗಳನ್ನು ಅಲ್ಲಲ್ಲಿ ತಿದ್ದುಪಾಟು ಮಾಡಲು ಅನುಕೂಲ್ಯವಾದ ಕೆಲವು ಸಲಹೆ ಗಳನ್ನಿತ್ತು ಪ್ರೋತ್ಸಾಹಿಸಿದುದಕ್ಕಾಗಿ ನಮ್ಮ ನಾಡಿನ ಉತ್ತಮ ಲೇಖಕರಲ್ಲೊಬ್ಬ ರಾದ ಶ್ರೀಮಾನ್ ಎಸ್ ಜಿ ಶಾಸ್ತ್ರಿಗಳವರಿಗೆ ನಾನು ವಿಶೇಷ ಕೃತಜ್ಞನಾಗಿದ್ದೇನೆ. ಅವರ ಸಲಹೆಗಳಿಗನುಸಾರವಾಗಿ ಕಥೆಗಳನ್ನು ಅಲ್ಲಲ್ಲಿ ಬದಲಾವಣೆಗೊಳಿಸಿ, "ರಂಗ ಭೂಮಿ"ಯಲ್ಲಿ ಪ್ರಕಟಗೊಳಿಸಿದೆನು. ಅವುಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ದುದಕ್ಕಾಗಿ "ರಂಗಭೂಮಿ"ಯ ವ್ಯವಸ್ಥಾಪಕರಾದ ಶ್ರೀಮಾನ್ ಡಿ ವಿ. ಅಯ್ಯ ನವರಿಗೂ, ಶ್ರೀಮಾನ್ ದ. ಕೃ. ಭಾರದ್ವಾಜರೇ ಮುಂತಾದ ಸಂಪಾದಕ ಮಂಡ ಲಿಯ ಸದಸ್ಯರಿಗೂ, ಈ ಪುಸ್ತಕವನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟ ಶ್ರೀಮಾನ್ ಬಿ ಶ್ರೀನಿವಾಸಯ್ಯಂಗಾರ್ಯರಿಗೂ ನಾನು ಬಹಳ ಕೃತಜ್ಞನಾಗಿದ್ದೇನೆ.

ಬೆಂಗಳೂರು,
ತಾ॥ ೨೮-೫-೧೯೩೦.

ಸಿ. ಕೆ. ವೆಂಕಟರಾಮಯ್ಯ.

# ಎರಡನೆಯ ಮುದ್ರಣದ ಪ್ರಸ್ತಾವನೆ

ನನ್ನ ದೇಶಬಾಂಧವರಾದ ಕನ್ನಡಿಗರು ಈ ಪುಸ್ತಕಕ್ಕೆ ಅನುಗ್ರಹಿಸಿದ ಪ್ರೋತ್ಸಾಹದಿಂದಲೂ, ಮುಂಬಯಿ ವಿಶ್ವವಿದ್ಯಾನಿಲಯದವರು ಇದನ್ನು ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಪಠ್ಯಪುಸ್ತಕವಾಗಿ ನೇಮಕಮಾಡಿದುದರಿಂದಲೂ, ಈ ಎರಡನೆಯ ಮುದ್ರಣವನ್ನು ಮಾಡಿಸುವ ಸುಯೋಗವು ಲಭಿಸಿತು ಇದಕ್ಕಾಗಿ ಅವರಿಗೆ ನಾನು ವಿಶೇಷ ಕೃತಜ್ಞನಾಗಿದ್ದೇನೆ ಇದನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟುದಕ್ಕಾಗಿ ಬೆಂಗಳೂರು ಪ್ರೆಸ್ಸಿನವರಿಗೆ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು,
ತಾ|| ೨೭-೧-೧೯೩೧

ಸಿ. ಕೆ. ವೆಂಕಟರಾಮಯ್ಯ.

# ಮೂರನೆಯ ಮುದ್ರಣದ ಪ್ರಸ್ತಾವನೆ

———— ೦ ————

ಈ ಪುಸ್ತಕವು ೧೯೩೩ನೆಯ ಇಸವಿಯ ಲೋವರ್ ಸೆಕೆಂಡರಿ ಮತ್ತು ಮಿಡ್ಲ್ ಸ್ಕೂಲ್ ಪರೀಕ್ಷೆಗಳಿಗೆ ಪಠ್ಯ ಪುಸ್ತಕವಾಗಿ ನೇಮಕವಾದುದರಿಂದ, ಮೂರನೆಯ ಮುದ್ರಣ ಮಾಡಿಸುವ ಸುಯೋಗವು ಲಭಿಸಿತು ಇದಕ್ಕಾಗಿ ನಾನು "ಟೆಕ್ಸ್ಟ್-ಬುಕ್ ಕಮಿಟಿ"ಯವರಿಗೂ ಮೈಸೂರು ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರವರಿಗೂ ಕೃತಜ್ಞನಾಗಿದ್ದೇನೆ ಈಚೆಗೆ ಈ ಕಥೆಗಳನ್ನು ಓದಿ, ಅವುಗಳನ್ನು ಅತ್ಯಂತವಾಗಿ ಶ್ಲಾಘಿಸಿದುದಕ್ಕಾಗಿ ಶ್ರೀಮಾನ್ ಬಳ್ಳಾಪೆ ವೆಂಕಟನಾರಣಪ್ಪ, ಎಂ ಎ, ಅವರಿಗೆ ನನ್ನ ಕೃತಜ್ಞತೆಯನ್ನು ಯಾವರೀತಿ ಸೂಚಿಸಬೇಕೋ ತಿಳಿಯದು ಅವರ ಉಪಕಾರವು ಅಲ್ಲಿಗೇ ಮುಗಿಯಲಿಲ್ಲ ವಯಸ್ಕರಾದ ವಾಚಕರ ದೃಷ್ಟಿಯಲ್ಲಿ ಸಾಧುವಾಗಿ ತೋರಿದರೂ, ಬಾಲಕರಿಗೆ ಅರ್ಥವಾಗದೆ ಕ್ಲಿಷ್ಟವಾಗಿದ್ದ "ಅಕ್ಷಮ್ಯವಾದ", "ವಿಷಾದಾಂತ ಪ್ರಹಸನ', "ಸೂಕ್ತಪಾರಾಯಣ", "ಪ್ರಶಸ್ತಿ", "ಸಿಡಿಮೀರಣ್ಣನ ಅಂದ ಚೆಂದ", "ಆಹತವಾಗಿ ನಿರ್ವಾಣೋನ್ಮುಖವಾಗಿರುವ ವ್ಯಾಘ್ರದಂತೆ", ಮುಂತಾದ ಕೆಲವು ಪದಪ್ರಯೋಗಗಳನ್ನು ಮಾರ್ಪಡಿಸಿ, ಇತರ ಕೆಲವು ಅಂಶಗಳಲ್ಲಿಯೂ ಗ್ರಂಥವನ್ನು ಅವರು ಪರಿಷ್ಕರಿಸಿಕೊಟ್ಟರು ಇದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ ಈ ಪುಸ್ತಕವು ಕನ್ನಡಿಗರ ಆದರಕ್ಕೆ ಪಾತ್ರವಾದುದರಿಂದ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸಿದ್ದೇನೆ ಇದನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟುದಕ್ಕಾಗಿ ಶ್ರೀಮಾನ್ ಬಿ ಶ್ರೀನಿವಾಸ ಅಯ್ಯಂಗಾರ್ಯರಿಗೆ ನಾನು ಕೃತಜ್ಞನಾಗಿದ್ದೇನೆ

ಬೆಂಗಳೂರು,
ತಾ|| ೨೦-೩-೧೯೩೩

ಸಿ. ಕೆ. ವೆಂಕಟರಾಮಯ್ಯ.

# ವಿಷಯಾನುಕ್ರಮಣಿಕೆ

# ಒಡವೆಯ ಆಸೆ

———o———

ಅಂದು ಭಾನುವಾರ. ಆದರೂ ಉಪಾಧ್ಯಾಯನಾದ ರಾಮಯ್ಯನಿಗೆ ಎಂದಿನಂತೆ ವಿರಾಮವಿರಲಿಲ್ಲ. ಹಿಂದಿನ ರಾತ್ರಿ ಆಲಿಕಲ್ಲು ಮಳೆ. ಮನೆಯಲ್ಲಿ ಆರೆಂಟು ಸ್ಥಳಗಳಲ್ಲಿ ಸೋರಿ, ಬಟ್ಟೆಬರೆಗಳೆಲ್ಲಾ ನೆನೆದುಹೋಗಿದ್ದುವು. ಹಾಳು ಮಳೆಗೆ ಕಣ್ಣಿಲ್ಲವೆಂದು ಮುಂತಾಗಿ ಗೊಣಗಿಕೊಳ್ಳುತ್ತ, ರಾಮಯ್ಯನು ಮತ್ತೆ ನೀರು ಮನೆಯೊಳಕ್ಕಿಳಿಯದಂತೆ ಹೆಂಚುಗಳನ್ನು ಸರಿಮಾಡುತ್ತಿದ್ದನು. ಒಂದೆರಡು ಗಂಟೆಗಳೊಳಗಾಗಿ ಕೆಲಸವು ಪೂರೈಸಿತು. ಅವನ ಹೆಂಡತಿಯಾದ ಕಮಲಮ್ಮನಿಗೆ ಅಂದು ಬಹಳ ಆಶ್ಚರ್ಯ. ತನ್ನ ಗಂಡನಿಗೆ ಕಸಬುದಾರರಿಗಿಂತ ಚೆನ್ನಾಗಿ ಹೆಂಚು ಕೈಯ್ಯಾಡುವ ಕೆಲಸವು ಬರುವುದೆಂಬ ಹೊಸ ವಿಷಯವು ಅವಳಿಗೆ ತಿಳಿದುದೇ ಅದಕ್ಕೆ ಮೊದಲನೆಯ ಕಾರಣ. ಗಂಟೆಗೆ ಒಂದೆರಡು ಸಾರಿಯಾದರೂ ನಸ್ಯವನ್ನು ಹಾಕಿಕೊಳ್ಳದೆ ಹೋದರೆ, ಅವನಿಗೆ ಬುದ್ಧಿಯೇ ಸರಿಯಾಗಿರುತ್ತಿರಲಿಲ್ಲ. ಹಾಗಿದ್ದೂ, ಅವನು ಈ ದಿನ ಒಂದೆರಡು ಗಂಟೆಗಳ ಕಾಲ ನಸ್ಯದ ಹಂಬಲೇ ಇಲ್ಲದೆ ಸುಮ್ಮನಿದ್ದುದು ಅವಳ ಆಶ್ಚರ್ಯಕ್ಕೆ ಎರಡನೆಯ ಕಾರಣ.

ಇಂಗಿತಜ್ಞಳಾದ ಕಮಲಮ್ಮನು ತನ್ನ ಪತಿಯು ಮಾಡುತ್ತಿದ್ದ ಹೆಂಚು ಹೊದಿಸುವ ಕೆಲಸವು ಪೂರೈಸುವ ವೇಳೆಗೆ ಅವನು ಕೈ ತೊಳೆದುಕೊಳ್ಳಲು ಬಿಸಿನೀರನ್ನು ತಂದಳು. ದುಡ್ಡಿಗೆ ತೊಂದರೆಯಾಗಿದ್ದ ತಮಗೆ ಕೂಲಿಗಾಗಿ ಕೊಡುವ ಹಣವು ಉಳಿಯಿತಲ್ಲಾ ಎಂಬ ಉತ್ಸಾಹವು ಅವಳ ಮುಖದಮೇಲೆ ಸ್ಪಷ್ಟವಾಗಿ ಕಾಣುತ್ತಿದ್ದಿತು. ರಾಮಯ್ಯನಂತು ನಸ್ಯವಿಲ್ಲದೆ ವ್ಯಗ್ರಚಿತ್ತನಾಗಿಹೋಗಿದ್ದನು. ತಾನು ಏನನ್ನು ಹೇಳುತ್ತಿರುವೆನೆಂಬುದು ತನಗೇ ಅರಿವಿಲ್ಲದೆ, ತನಗೆ ಬರುತ್ತಿದ್ದ ಒಂದು ಶ್ಲೋಕದ ಕೊನೆಯ ಪಾದವನ್ನು ರಾಗವಾಗಿ ಹೇಳಿದನು. ಅದನ್ನು ಕೇಳಿದೊಡನೆಯೇ, ಮೋಡವು

ಮುಚ್ಚಿಕೊಂಡಾಗ ಸೂರ್ಯನ ಬಿಸಿಲು ಮರೆಯಾದಂತೆ, ಕಮಲಮ್ಮನ ಉತ್ಸಾಹವು ಎಲ್ಲಿಗೊ ಓಡಿತು ಅವಳು ಕಣ್ಣಿನಲ್ಲಿ ನೀರನ್ನು ಸುರಿಸುತ್ತ, "ಈ ಹಾಳು ಶ್ಲೋಕವನ್ನು ಹೇಳಬೇಡಿ ಎಂದರೆ, ನೀವು ಕೇಳುವುದೇ ಇಲ್ಲ" ಎಂದಳು

ಪೌರಾಣಿಕನು ಕಥಾರಂಭ ಮಾಡುವಾಗ, "ಕಿಂಚಿತ್ಪೂರ್ವಕಥಾನುವಾದಃ" ಎಂದು ಸಂಕ್ಷೇಪವಾಗಿ ಹಿಂದಿನ ಕಥೆಯನ್ನು ಹೇಳುವುದನ್ನು ತಾವೆಲ್ಲರೂ ಕೇಳಿಯೇ ಇದ್ದೀರಿ ಈಗ ನಾನೂ ಅದೇ ರೀತಿ ಮಾಡಬೇಕಾಗಿದೆ ಇಲ್ಲದೆ ಹೋದರೆ, ಕಮಲಮ್ಮನ ಅಳುವಿನ ಅರ್ಥವು ಸರಿಯಾಗಿ ನಿಮ್ಮ ಮನಸ್ಸಿಗೆ ಅಂಟುವಹಾಗಿಲ್ಲ ಕಮಲಮ್ಮನು ಸ್ತ್ರೀ ಜಾತಿಯಲ್ಲಿ ಸುಂದರಿಯರೆನಿಸಿದವರ ಗುಂಪಿಗೆ ಸೇರಿದವಳು ತಾನು ಸುಂದರಿಯೆನ್ನುವುದು ಅವಳಿಗೂ ಚೆನ್ನಾಗಿ ತಿಳಿಯುವುದು ಅಷ್ಟೇ ಅಲ್ಲ, ತನ್ನ ರೂಪಿಗೆ ತಕ್ಕಂತೆ ಒಡವೆಗಳನ್ನಿಟ್ಟುಕೊಳ್ಳಲು ಅವಳಿಗೆ ಬಹಳ ಆಸೆ ಆದರೆ, ಅವಳು ಹುಟ್ಟಿದುದು ಬಡವರಾದ ಶಾನುಭೋಗರ ಮನೆಯಲ್ಲಿ, ಕೈ ಹಿಡಿದುದು ಉಪಾಧ್ಯಾಯ ರಾಮಯ್ಯನನ್ನು ಹದಿನೇಳು ರೂಪಾಯಿಗಳ ಸಂಬಳವನ್ನು ತರುತ್ತಿದ್ದ ಅಳಿಯ ರಾಮಯ್ಯನೇ ಮಾವನ ಮನಸ್ಸಿಗೆ ಭಾಗ್ಯವಂತ ಇನ್ನು ಕಮಲಮ್ಮನ ಆಸೆಯು ಈಡೇರುವ ಬಗೆ ಹೇಗೆ? ತಾನು ದೊಡ್ಡ ಮನೆಯನ್ನು ಸೇರುವುದಾಗಿಯೂ, ವಜ್ರ ವೈಡೂರ್ಯಗಳನ್ನು ಕೆತ್ತಿದ ಒಡವೆಗಳನ್ನು ಇಟ್ಟುಕೊಳ್ಳುವುದಾಗಿಯೂ, ಕಮಲಮ್ಮನು ತನ್ನ ಮದುವೆಗೆ ಮೊದಲು ಎಷ್ಟೋ ಸಲ ಯೋಚಿಸುತ್ತಿದ್ದಳು ಅವಳ ಬಾಲ್ಯದಲ್ಲೊಂದುದಿನ, ಅವಳು ಮೂರುನಾಲು ಮಲ್ಲಿಗೆಯ ಹಣ್ಣುಮೊಗ್ಗುಗಳನ್ನು ಪೋಣಿಸಿ, ಅದರ ಸರವನ್ನು ಕಾಲುಸರಪಣಿಯಂತೆ ಕಟ್ಟಿಕೊಂಡು "ಅಮ್ಮಾ, ಇದು ನೋಡು, ಎಷ್ಟು ಚೆನ್ನಾಗಿದೆ! ನಾನು ದೊಡ್ಡವಳಾದ ಮೇಲೆ ಚಿನ್ನದ ಕಾಲುಸರಪಣಿಯನ್ನೇ ಹಾಕಿಕೊಳ್ಳುತ್ತೇನೆ, ಗೊತ್ತೋ ನಿನಗೆ?" ಎಂದು ಹೇಳಿದ್ದಳು ಅವಳ ತಾಯಿಯು ನಕ್ಕು, "ಬೆಳ್ಳಿಯ ಗೆಜ್ಜೆಗಳಿರುವ ಕಾಲುಸರಪಣಿ ಸಿಕ್ಕಿದಾಗ್ಗೆ ನೋಡಿಕೊಳ್ಳೋಣ, ಚಿನ್ನದ ಕಾಲುಸರಪಣಿಯ ಯೋಚನೆಯೇಕೆ ನಮಗೆ? ಇಷ್ಟಕ್ಕೂ, ರಾಜ ಮನೆ

ತನದವರು ಹೊರತು, ನಮ್ಮಂಥವರು ಚಿನ್ನದ ಒಡವೆಯನ್ನು ಕಾಲಿಗೆ ಹಾಕಿಕೊಳ್ಳಬಾರದು'' ಎಂದು ಹೇಳಿದಳು ಕಮಲಮ್ಮನು, ``ನಾನು ಚಿನ್ನದ್ದೇ ಹಾಕಿಕೊಂಡೇ ಬಿಡ್ತೀನಿ, ಅದರಿಂದೇನಾಗುತ್ತೋ ನೋಡಿಯೇ ಬಿಡ್ತೀನಿ'' ಎಂದು ಹೇಳಿದ್ದಳು ಅವಳ ತಾಯಿಯು ಈಗಲೂ ಒಂದೊಂದು ದಿನ ಅದನ್ನು ಜ್ಞಾಪಿಸಿಕೊಂಡು ನಗುವಳು ಅಂತು, ಕಮಲಮ್ಮನ ಒಡವೆಯ ಆಸೆಯು, ಅವಳ ವಿವಾಹದೊಡನೆಯೇ, ನೀರು ಬಿದ್ದ ಅರಳಿನ ರಾಶಿಯಂತೆ ಇದ್ದಕಡೆಯೇ ಉಡುಗಿಹೋಯಿತು ದೇವರು ಕೊಟ್ಟ ಒಡವೆಗಳಾದ ರೂಪವೂ ಸದ್ಗುಣಗಳೂ ತುಂಬಿದ್ದರೆ, ಉಳಿದ ಚಿನ್ನ ಬೆಳ್ಳಿಯ ಒಡವೆಗಳ ಹಗರಣವೇಕೆಂದು ಅವಳ ತಾಯಿಯು ಎಷ್ಟೋ ಸಾರಿ ಹೇಳಿದ್ದರೂ, ಅವಳ ಮನಸ್ಸಿಗೆ ತೃಪ್ತಿಯಿಲ್ಲ ತಾನು ಸರಿಯಾದ ಮನೆಯಲ್ಲಿ ಹುಟ್ಟಿ, ಸರಿಯಾದ ಮನೆಯನ್ನು ಸೇರುವಂತೆ ಮಾಡದೆ, ಬ್ರಹ್ಮನು ತನಗೆ ದ್ರೋಹಮಾಡಿದನೆಂದು ಅವಳು ದೃಢವಾಗಿ ನಂಬಿದ್ದಳು ಆದರೂ, ಅವಳಿಗೆ ಈ ಕಾರಣದಿಂದ ತಾಯಿತಂದೆಗಳ ಮೇಲಣ ಪ್ರೀತಿಯಾಗಲಿ ಪತಿಭಕ್ತಿಯಾಗಲಿ ಲೇಶವೂ ಕಡಿಮೆಯಾಗಿರಲಿಲ್ಲ ಬ್ರಹ್ಮನು ಮಾಡಿದ ತಪ್ಪಿಗೆ ಅವರನ್ನೇಕೆ ದೂಷಿಸಬೇಕೆಂಬುದು, ಅವಳು ತನ್ನ ಮನಸ್ಸನ್ನು ಕೇಳಿಕೊಳ್ಳುತ್ತಿದ್ದ ಪ್ರಶ್ನೆ

ಕಮಲಮ್ಮನಿಗೆ ಒಳ್ಳೆಯ ಸೀರೆ ಕುಪ್ಪಸಗಳಿಲ್ಲ, ಒಡವೆ ವಸ್ತುಗಳಿಲ್ಲ ತನ್ನ ರೂಪವು ಬೆಳಗಬೇಕಾಗಿದ್ದರೆ ಒಡವೆಗಳಿಂದಲೇ ಎಂಬುದೂ, ತಾನು ಹುಟ್ಟಿದ್ದುದೇ ಒಡವೆಗಳನ್ನು ಧರಿಸಿಕೊಳ್ಳುವುದಕ್ಕೆಂಬುದೂ ಅವಳ ಮನಸ್ಸಿನಲ್ಲಿ ನಾಟಹೋಗಿದ್ದುವು ಅವಳ ಈ ಮನೋಭಾವನೆಯನ್ನು ಹೋಗಲಾಡಿಸಬೇಕೆಂಬ ಉದ್ದೇಶದಿಂದ ರಾಮಯ್ಯನು ಶಾಕುಂತಲ ನಾಟಕವನ್ನು ಅವಳಿಗೆ ಹತ್ತಾರು ಸಲ ಓದಿ ಹೇಳಿದ್ದನು, ಶಕುಂತಳೆಯು ಪುಷ್ಪಗಳಿಂದಲೇ ಅಲಂಕಾರ ಮಾಡಿಕೊಳ್ಳುತ್ತಿದ್ದಳೆಂದು ಮುಂತಾಗಿ ಅವಳಿಗೆ ಬೋಧಿಸಿದ್ದನು. ಅದರಲ್ಲಿಯೂ,

**ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ**
**ಮಲಿನಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂ ತನೋತಿ ।**

ಇಯಮಧಿಕಮನೋಜ್ಞಾ ವಲ್ಕಲೇನಾಪಿ ತನ್ವೀ
ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ ||

ಎಂಬ ಶ್ಲೋಕದ ವಿಚಾರದಲ್ಲಂತು, ದಿವಂಗತರಾದ ಬಸವಪ್ಪ ಶಾಸ್ತ್ರಿಗಳ ಕನ್ನಡದ ಭಾಷಾಂತರದ ಜೊತೆಗೆ ಸಂಸ್ಕೃತದ ಮೂಲವನ್ನೂ ಪಂಡಿತರಿಂದ ಕೇಳಿ ತಿಳಿದುಕೊಂಡು, ಅವಳಿಗೆ ಅದನ್ನು ಪದೇ ಪದೇ ಬಿಡಿಸಿ ಬಿಡಿಸಿ ಹೇಳಿದ್ದನು ಈ ಶ್ಲೋಕದ ಕೊನೆಯ ಪಾದದ ತಾತ್ಪರ್ಯವು ಅವಳ ಮನಸ್ಸಿಗೆ ಚೆನ್ನಾಗಿ ಹಿಡಿದು, "ರೂಪ ಮಾಧುರ್ಯವಿರುವವರಿಗೆ ಒಡವೆಗಳಿಂದ ಏನೇನೂ ಪ್ರಯೋಜನವಿಲ್ಲ, ಕುರೂಪಿಗಳು ಒಡವೆಗಳನ್ನು ಹಾಕಿಕೊಂಡು ಫಲವಿಲ್ಲ" ಎಂಬ ಅಭಿಪ್ರಾಯವು ಖಚಿತವಾಗಿ ನಿಲ್ಲಲೆಂಬ ಉದ್ದೇಶದಿಂದ ಅವನು ಅದನ್ನು ಆಗಾಗ ಹೇಳುತ್ತಲೇ ಇದ್ದನು ಹೋದ ಕಡೆಗೆ ರಾಗವನ್ನು ಹರಿಯಬಿಟ್ಟು ಕೀರಲು ಧ್ವನಿಯಲ್ಲಿ, "ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ ||" ಎಂಬುದಾಗಿ ರಾಮಯ್ಯನು ಹಾಡಿದುದೇ ಕಮಲಮ್ಮನು ಕಣ್ಣೀರನ್ನು ಸುರಿಸಲು ಕಾರಣವಾಯಿತು ಹೀಗೆ ಹಗರಣವಾಗುವುದೆಂದು ರಾಮಯ್ಯನು ಅರಿತಿರಲಿಲ್ಲ ಆದಕಾರಣ ಅವನು ಬೆಪ್ಪುಮೋರೆ ಹಾಕಿಕೊಂಡು ನಿಂತುಕೊಂಡನು ಆದರೂ, ಇದ್ದುದರಲ್ಲಿ ಸ್ವಲ್ಪ ಪ್ರತಿಭೆಯನ್ನು ತಂದುಕೊಂಡು, ನಾಟಕದವರ ರೀತಿಯನ್ನನುಕರಿಸುತ್ತ, "ಸುಂದರೀ! ರೂಪ ಮಾಧುರ್ಯದಿಂದ ಸುರಲೋಕದವರನ್ನು ನಾಚಿಸುತ್ತಿರುವ ನಿನಗೆ, ಇಹಲೋಕದ ತುಚ್ಛವಾದ ಒಡವೆಗಳಿಂದ ಆಗಬೇಕಾದುದೇನು?" ಎಂದನು ಅವನ ಮಾತುಗಳನ್ನು ಕೇಳಿ—ಅವನು ಆ ಮಾತುಗಳನ್ನಾಡಿದ ಪರಿಯನ್ನು ನೋಡಿ—ಕಮಲಮ್ಮನಿಗೆ ಸ್ವಲ್ಪ ನಗುವು ಬಂದಿತು. ಮಳೆಯು ಬೀಳುತ್ತಿರುವಾಗ ಹೊಂಬಿಸಿಲು ಬಂದಂತಾಯಿತು. ಕಮಲಮ್ಮನು, "ನಾನು ಕಣ್ವ ಋಷಿಯಂಥವರ ಮಗಳಾಗಬೇಕಾಗಿತ್ತು" ಎಂದಳು ರಾಮಯ್ಯನು ಅದೇಕೆ ಎಂದು ಕೇಳಿದನು. ಅದಕ್ಕೆ ಕಮಲಮ್ಮನು, "ನೀವೇ ಹೇಳಿಲ್ಲವೆ? 'ಇತ್ತುದದೊಂದು ಶಾಖಿ' ಅದೂ ಇದೂ ಎಂತ. ಆಗ ಎಷ್ಟೊಂದು ಒಡವೆಗಳು ಸಿಕ್ಕಿರಬೇಕು! ಮರ ಮರವೂ ಒಂದೊಂದು ಒಡವೆಯನ್ನು ಕೊಟ್ಟಿತಂತೆ. ಅಬ್ಬ! ಎಷ್ಟು ಒಡವೆ

ಗಳಪ್ಪ!" ಎಂದು ಉತ್ತರ ಹೇಳಿದಳು. ಆ ವೇಳೆಗೆ ಸರಿಯಾಗಿ ಒಬ್ಬ ಗೌಡನು ಮನೆಯೊಳಕ್ಕೆ ಬಂದನು. ರಾಮಯ್ಯನು ಕೈಗಳನ್ನು ತೊಳೆದು ಕೊಂಡುದೂ ಮುಗಿದಿದ್ದಿತು ರಾಮಯ್ಯನೇ ಆ ಊರಿನ ಧನ್ವಂತರಿ. ಗೌಡನ ಕೋರಿಕೆಯಂತೆ, ಅವನು ರೋಗಿಯನ್ನು ನೋಡಲು, ಗೌಡನ ಮನೆಗೆ ಹೊರಟನು ಕಮಲಮ್ಮನೂ ಅಡಿಗೆಯ ಪ್ರಯತ್ನವನ್ನು ಮಾಡಿದಳು

* * * * *

ಒಂದು ದಿನ ಮಧ್ಯಾಹ್ನ ರಾಮಯ್ಯನ ಸಂತೋಷವೇ ಸಂತೋಷ. ಮೊದಲನೆಯ ತರಗತಿಯಲ್ಲಿ ಪರೀಕ್ಷೆಯಾಯಿತೆಂಬುದನ್ನು ಅದೇ ತಾನೆ ತಿಳಿದ ವಿದ್ಯಾರ್ಥಿಗೂ ಅಷ್ಟು ಸಂತೋಷವಾಗುತ್ತಿರಲಿಲ್ಲ ರಾಮಯ್ಯನು ತನಗೆ ಬಂದಿದ್ದ ಕಾಗದವನ್ನು ತಿರುಗಿಸಿ ತಿರುಗಿಸಿ ನೋಡುತ್ತ ಮನೆಗೆ ಬಂದನು ಕಾಳಿದಾಸ ಮಹಾಕವಿಯ ಒಂದು ನಾಟಕದಲ್ಲ, ಗುಟ್ಟನ್ನು ಹೊಟ್ಟೆಯೊಳಗೆ ಅಡಗಿಸಿಕೊಳ್ಳಲಾರದೆ ವಿದೂಷಕನು ಸಂಕಟಪಡುತ್ತಿದ್ದಂತೆ, ರಾಮಯ್ಯನು ತನ್ನ ಆನಂದವನ್ನು ತಾಳಲಾರದೆ ಸಂಕಟಪಡುತ್ತಿದ್ದನು ಅವನು ಕಮಲಮ್ಮನ ಬಳಿಗೆ ಬಂದು, "ಇವತ್ತು ನನಗೆ ಎಂಥಾ ಕಾಗದವು ಬಂದಿದೆ, ತಿಳಿಯೋದೋ ನಿನಗೆ?" ಎಂದನು ಕಮಲಮ್ಮನು ಸ್ವಲ್ಪ ನಗುತ್ತ, "ಕಾಗದವು ನಿಮ್ಮ ಕೈಯಲ್ಲೇ ಇದೆ ನನಗೆ ಹೇಗೆ ತಿಳಿಯುತ್ತೆ?" ಎಂದು ಹೇಳಿ ಹಾಸ್ಯಮಾಡಿದಳು ರಾಮಯ್ಯನು, ಯುತ್ತಿಗೆಯಲ್ಲಿ ಜಯಲಾಭವಾಗುವ ಉಪಾಯವನ್ನು ಕಂಡುಹಿಡಿದ ದಳವಾಯಿಯಂತೆ, ದರ್ಪದಿಂದ, "ಹಾಸ್ಯಕ್ಕೆ ಯಾವುದು ಸಮಯವೆಂಬುದೇ ನಿನಗೆ ತಿಳಿಯದು ಈ ಕಾಗದವನ್ನಾದರೂ ನೋಡು, ಎಂಥ ಕಾಗದ! ನಮ್ಮ ಇನ್‌ಸ್ಪೆಕ್ಟರ್ ಸಾಹೇಬರು ನನಗೆ ಬರೆದಿದ್ದಾರೆ ನಮ್ಮ ಹೆಡ್ಮೇಷ್ಟರಿಗೆ ಕೂಡ ಅವರಿಂದ ಇಂಥ ಕಾಗದ ಬಂದಿಲ್ಲ" ಎಂದನು

ಕಮಲಮ್ಮ—"ಅದಕ್ಕೇನಂತೆ ಅತಿಶಯ? ನಮ್ಮ ಜನವಾದದ್ದರಿಂದ ಬರೆದಿದ್ದಾರೆ! ಸ್ವಜನವೆಂದ ಮೇಲೆ ಅಷ್ಟೂ ಬೇಡವೆ? ಇದರ ಮೇಲೆ ದೂರದ ಬಳಗ."

ರಾಮಯ್ಯ.—"ನಮ್ಮ ಸಾಹೇಬರದು ಎಷ್ಟು ದೊಡ್ಡ ಪದವಿ! ಒಂದು ಡಿಸ್ಟ್ರಿಕ್ಟೇ ಅವರ ಕೈ ಕೆಳಗಿದೆ. ನಾನೆಷ್ಟು ಅಲ್ಪ! ಅವರು ನನಗೆ ಬರೆದಿದ್ದಾರೆ ಇವಳಿಗೆ ನಮ್ಮ ಸಾಹೇಬರೂ ಲಕ್ಷ್ಯವಿಲ್ಲ."

ಕಮಲಮ್ಮ.—(ನಗುತ್ತ) "ನಿಮ್ಮ ಸಾಹೇಬರು ನನಗೇನು ಸಾಹೇಬರೆ? ನಮ್ಮ ಸಾಹೇಬರು ನೀವು ಹೋಗಲಿ, ಅವರೇನು ಬರೆದಿದ್ದಾರೆ?"

ರಾಮಯ್ಯ.—"ಹಾಗೆ ಬಾ ಮತ್ತೆ. ಅವರ ಮನೆಯಲ್ಲಿ ತಿಂಗಳ ನಾಗೋಲಿಯಂತೆ ಅದಕ್ಕೋಸ್ಕರ ಭಾನುವಾರ ಬರಹೇಳಿ ಬರೆದಿದ್ದಾರೆ ನಾನೂ ನೀನೂ ಇಬ್ಬರೂ ಹೋಗಬೇಕಂತೆ ಅವರ ಹೆಂಡತಿಯು ನೀನು ಬರಬೇಕೆಂದು ಕೋರಿದ್ದಾರಂತೆ"

ಕಮಲಮ್ಮ.—"ನೀವು ಹೋಗಿ ಬನ್ನಿ, ಬೇಡವೆಂದವರು ಯಾರು?"

ರಾಮಯ್ಯ.—"ಅವರು ಅಲ್ಲಿಂದ ಬರೆದಿದ್ದಾರೆ ಹೋಗದೆ ಉಂಟೆ? ಇಬ್ಬರೂ ಹೋಗಿ ಬರೋಣ."

ಕಮಲಮ್ಮ—"ಅದಕ್ಕೇ ನಾನು ಹೇಳಿದ್ದು: ನೀವು ಹೋಗಿ ಬನ್ನಿ; ನಾನಂತು ಬರುವವಳೇ ಅಲ್ಲ"

ಕಾಗದವನ್ನು ಓದಿಹೇಳಿ ಕಮಲಮ್ಮನನ್ನು ಸಂತೋಷಪಡಿಸಬೇಕೆಂದು ಬಂದಿದ್ದ ರಾಮಯ್ಯನ ಉತ್ಸಾಹಕ್ಕೆ ಪೂರ್ಣಗ್ರಹಣವು ಹಿಡಿಯಿತು ಎಷ್ಟೋ ಚೆನ್ನಾಗಿ ಹಾಡಬೇಕೆಂದಿದ್ದ ಸಂಗೀತಗಾರನು, ಇಬ್ಬನಿಯಲ್ಲಿ ತಂಬೂರಿಯು ನೆನೆದು (ಕಿವಿಡು ಬಿದ್ದು), ಶ್ರುತಿಯು ಇಳಿದುಹೋದುದನ್ನು ನೋಡಿದಂತಾಯಿತು, ಅವನ ಆಗಿನ ಸ್ಥಿತಿ ಅವನು ಸಮಾಧಾನವನ್ನು ಹೇಳಿ ಕಮಲಮ್ಮನನ್ನು ಒಪ್ಪಿಸುವ ಯತ್ನಮಾಡಿದನು ಕಮಲಮ್ಮನು ಬಿಕ್ಕಿಬಿಕ್ಕಿ ಅಳತೊಡಗಿದಳು ರಾಮಯ್ಯನು ಅಪ್ರತಿಭನಾಗಿ ಅವಳನ್ನು ಬಹಳ ಸಂತೈಸಿ, ಅವಳು ಅತ್ತುದಕ್ಕೆ ಕಾರಣವನ್ನು ಕೇಳಿದನು ಅವಳು ಬಲವಂತದಿಂದ ದುಃಖವನ್ನು ನುಂಗಿ, "ನಿಮಗೆ ಸಂಸಾರದ ಹೊಟವೇ ತಿಳಿಯದು; ಮಾಡಬೇಕಲ್ಲಾ ಅಂತ ಹೆಸರಿಗೆ ಸಂಸಾರ ಮಾಡುತ್ತಿದ್ದೀರಿ ನನಗೆ ಒಳ್ಳೆ ಸೀರೆಯಿಲ್ಲ, ಒಳ್ಳೆ ಕುಪ್ಪಸವಿಲ್ಲ, ಒಡವೆ ವಸ್ತುಗಳು ಮೊದಲೇ

ಇಲ್ಲ; ನನಗೆ ಅವಮಾನ, ನಾನು ಬೇರೆ ಅವರ ಮನೆಗೆ ಬರಲಾರೆ; ಬೇಕಾದರೆ ನೀವು ಹೋಗಿ ಬನ್ನಿ.''

ರಾಮಯ್ಯ—(ಏರಿಬರುತ್ತಿದ್ದ ಕೋಪವನ್ನು ತಡೆದುಕೊಂಡು) "ನನ್ನನ್ನು ಜರಿದು ನಿನಗೇನು ಫಲಬರುತ್ತೋ ಕಾಣೆ ನನಗೆ ಬರುವುದರಲ್ಲಿ ಒಂದು ಬಿಡಿಗಾಸನ್ನೂ ಪೋಲುಮಾಡುತ್ತ ಇಲ್ಲ ಕಣ್ಣಿಲ್ಲದ ದೈವವು ನನಗೆ ಹೆಚ್ಚು ಹಣವನ್ನು ಕೊಡಲಿಲ್ಲ ಕೊಟ್ಟಿದ್ದರೆ ನಾನೇನು ಬೇಡವೆನ್ನುತ್ತಿದ್ದೆನೆ? ನೀನು ಹಠಮಾಡುವುದು ಸರಿಯಲ್ಲ ದೊಡ್ಡವರು ಬರಹೇಳಿದರೆ ನಾವು ಹೋಗಬೇಕಾದುದೇ ನ್ಯಾಯ''

ತಾನು ಹೇಳಿದುದು ಮಿತಿಮೀರಿ ಹೆಚ್ಚಾಯಿತೆಂದೂ, ತಾನು ಬಿರುನುಡಿಗಳನ್ನಾಡಬಾರದಾಗಿದ್ದಿತೆಂದೂ, ಕಮಲಮ್ಮನಿಗೆ ಚೆನ್ನಾಗಿ ತಿಳಿಯಿತು ಆದರೇನು? ಆಡಿದ ಮಾತು ಹಿಂದಕ್ಕೆ ಬಾರದು. ಒಡೆದ ಮುತ್ತು ಸರಿಹೋಗದು. ಕಮಲಮ್ಮನು ಸುಮ್ಮನಾದಳು ರಾಮಯ್ಯನು ತಾನು ಕೋಪವನ್ನು ಪೂರ್ತಿಯಾಗಿ ತಡೆಯಬೇಕಾಗಿದ್ದಿತೆಂದೂ, ಮಾತನ್ನೇ ಆಡದೆ ಸುಮ್ಮನಿರಬೇಕಾಗಿದ್ದಿತೆಂದೂ ಭಾವಿಸಿಕೊಂಡನು ಒಂದೆರಡು ನಿಮಿಷಗಳ ಕಾಲ ಅವರಲ್ಲಿ ಒಬ್ಬರೂ ತುಟಿಯನ್ನು ಅಲುಗಿಸಲಿಲ್ಲ; ಇಬ್ಬರ ಮನಸ್ಸಿನಲ್ಲಿಯೂ ಪಶ್ಚಾತ್ತಾಪ ಕೊನೆಗೆ ರಾಮಯ್ಯನು ಪಾಠಶಾಲೆಗೆ ಹೊತ್ತಾಯಿತೆಂದು ಮೆಲ್ಲಗೆ ಹೇಳಿ ಹೊರಟುಹೋದನು ಬಿಸಿಲು ಕಾಯುತ್ತಿದ್ದುದು ತಪ್ಪಿ ಮೋಡವು ಕವಿದುಕೊಂಡಿತು

ಮರುದಿನ ಪಾಠಶಾಲೆಗೆ ರಜ ಕಮಲಮ್ಮನಿಗೆ ಹಿಂದಿನ ರಾತ್ರಿ ಮನಸ್ಸಿನ ಉದ್ವೇಗದಿಂದ ಬಹಳಹೊತ್ತು ನಿದ್ದೆಯೇ ಬರಲಿಲ್ಲ ಆದುದರಿಂದ, ಎಂದಿನಂತೆ ಅವಳಿಗೆ ಬೇಗ ಎಚ್ಚರವಾಗಲಿಲ್ಲ ಅವಳು ಎದ್ದು ನೋಡುವ ವೇಳೆಗೆ ರಾಮಯ್ಯನು ಮನೆಯಲ್ಲಿರಲಿಲ್ಲ ಅವನಿಗೆ ಇನ್ನೂ ಕೋಪವು ಇಳಿದಿಲ್ಲವೆಂದು ಕಮಲಮ್ಮನು ಭಾವಿಸಿಕೊಂಡಳು "ಇವತ್ತು ಹೇಗೂ ರಜ ಹಬ್ಬದ ಅಡಿಗೆಯಾದರೂ ಮಾಡಿ ಅವರ ಮುನಿಸನ್ನು ಇಳಿಸಬೇಕು. ಬಾಯಿ ಸೀಯಾದರೆ ಕೋಪವು ಹಾರಿಹೋದರೂ ಹೋಗ

ಬಹುದು" ಎಂದು ಅವಳು ನಿರ್ಧರ ಮಾಡಿಕೊಂಡಳು; ಗಂಡನ ಮನಸ್ಸನ್ನು ನೋಯಿಸಿದುದಕ್ಕಾಗಿ ತನ್ನ ಮನಸ್ಸಿಗೆ ತಾನೇ ಬರೆಗಳನ್ನೆಳೆದುಕೊಂಡಳು. ಹೊತ್ತು ಹನ್ನೆರಡು ಗಂಟೆಯ ಮೇಲಾಯಿತು, ರಾಮಯ್ಯನು ಮನೆಗೆ ಬರಲಿಲ್ಲ, ಕಮಲಮ್ಮನು ಅಡಿಗೆಯನ್ನು ಪೂರೈಸಿ ಅವನ ಆಗಮನವನ್ನೇ ಎದುರುನೋಡುತ್ತಿದ್ದಳು, ನೋಡಿ ನೋಡಿ ಸಾಕಾಗಿ, ಕೊನೆಗೆ ಸ್ವಲ್ಪ ಹೊತ್ತು ಅತ್ತುಬಿಟ್ಟಳು, ಹಬ್ಬದ ಅಡಿಗೆಯನ್ನು ಮಾಡಿಟ್ಟು ಅಳುವುದು ಸರಿಯಲ್ಲವೆಂದು ತನಗೆ ತಾನೇ ಸಮಾಧಾನ ಮಾಡಿಕೊಂಡು, ಮುಖವನ್ನು ಚೆನ್ನಾಗಿ ತೊಳೆದುಕೊಂಡಳು, ಬಳಿಕ ಮುಖವನ್ನೊರಸಿಕೂಂಡು ಕುಂಕುಮದ ಬೊಟ್ಟನ್ನಿಟ್ಟುಕೊಂಡಳು, ಇರುವಂತಿಗೆಯ ಹೂಗಳಿದ್ದ ಬುಟ್ಟಿಯನ್ನು ತೆಗೆದುಕೊಂಡು ಒಂದು ದಂಡೆಯನ್ನು ಕಟ್ಟುವುದಕ್ಕೆ ಪ್ರಾರಂಭಿಸಿದಳು ಊಟವಾದ ಮೇಲೆ ಅದನ್ನು ತನ್ನ ಗಂಡನ ಕೊರಳಿಗೆ ಹಾಕಿ ಅವನನ್ನು ಆನಂದಪಡಿಸಬೇಕೆಂಬುದು ಅವಳ ಸಂಕಲ್ಪ. ಅವಳು ಯೌವನದ ಹೊಸಲನ್ನು ಮೆಟ್ಟಿದ್ದರೂ, ಬಾಲಭಾವವು ಇನ್ನೂ ಮರೆಯಾಗಿರಲಿಲ್ಲ

ಇರುವಂತಿಗೆಯ ದಂಡೆಯನ್ನು ಕಟ್ಟುವ ಕೆಲಸವೂ ಮುಗಿಯಿತು; ಆದರೂ ರಾಮಯ್ಯನು ಬರಲಿಲ್ಲ ಕಮಲಮ್ಮನ ಮನಸ್ಸಿನಲ್ಲಿ ಕಳವಳಕ್ಕೆ ಮೊದಲಾಯಿತು ಒಂದೊಂದು ಕ್ಷಣವನ್ನು ಕಳೆಯುವುದೂ ಕಷ್ಟವಾಯಿತು ಕೊನೆಗೆ, ರಾಮಯ್ಯನು ಬಾಗಿಲನ್ನು ತಟ್ಟಿ, "ಬಾಗಿಲೂ" ಎಂದು ಕೂಗಿದನು. ಕಮಲಮ್ಮನು, "ಸದ್ಯ ಇವತ್ತಿಗೆ ಬದುಕಿದೆ" ಎಂದುಕೊಂಡು ಓಡಿಹೋಗಿ ಬಾಗಿಲನ್ನು ತೆರೆದಳು ರಾಮಯ್ಯನು ಬಹಳ ದೂರದಿಂದ ಬಿಸಿಲಿನಲ್ಲಿ ಆಯಾಸಪಟ್ಟು ಬಂದಿದ್ದನೆಂಬುದು ಅವನ ಮುಖವನ್ನು ನೋಡಿದೊಡನೆಯೇ ಅವಳಿಗೆ ಗೊತ್ತಾಯಿತು "ಅಯ್ಯೋ! ಇಷ್ಟುಹೊತ್ತು ಎಲ್ಲಿ ಹೋಗಿದ್ದಿರಿ? ಬಿಸಿಲಿನಲ್ಲಿ ಮುಖವೆಲ್ಲ ಕೆಂಚಗಾಗಿ ಹೋಗಿದೆಯಲ್ಲಾ! ಎಂದುಕೊಂಡು ಬಚ್ಚಲು ಮನೆಗೆ ಹೋಗಿ ಬಂದು ಚೆಂಬಿನಲ್ಲಿ ತಣ್ಣೀರನ್ನು ತಂದಿಟ್ಟಳು ರಾಮಯ್ಯನು ತನ್ನ ಕೈಯಲ್ಲಿದ್ದ ಗಂಟನ್ನು ಕೊಟಡಿಯಲ್ಲಿಟ್ಟು, ಅಂಗಿಯನ್ನೂ ರುಮಾಲನ್ನೂ ತೆಗೆದುಹಾಕಿ, ಕೈಕಾಲುಗಳನ್ನು ತೊಳೆದುಕೊಳ್ಳಲು ಈಚೆಗೆ ಬಂದನು. ಕೋಪಿಸಿಕೊಂಡು ಹೋಗಿದ್ದ ಗಂಡನು

ಮತ್ತೆ ಮನೆಗೆ ಬಂದನೆಂಬ ಸಡಗರದಲ್ಲಿ ಕಮಲಮ್ಮನಿಗೆ ದಿಕ್ಕೇ ತೋರದು. ಅಂಗಿಯನ್ನೂ ರುಮಾಲನ್ನೂ ತೆಗೆದುಹಾಕಿ ರಾಮಯ್ಯನು ಈಚೆಗೆ ಬಂದುದನ್ನು ನೋಡಿ ಕಮಲಮ್ಮನು, "ಈ ಉರಿಬಿಸಿಲಿನಲ್ಲಿ ಬರಿಯ ತಲೆಯಲ್ಲಿ ಹೋಗಿದ್ದಿರಾ? ಈ ಪಾಪವೂ ಉಂಟೆ?" ಎಂದಳು ರಾಮಯ್ಯನು ಸ್ವಲ್ಪ ನಕ್ಕು, "ಅಯ್ಯೋ ಹುಚ್ಚಿ! ನಾನು ಬಂದಾಗ ನೋಡಲಿಲ್ಲವೆ? ಇಷ್ಟಕ್ಕೂ, ಬಾಗಿಲು ತೆಗೆದವಳೇ ನೀನು, ನೀರು ತರಲು ಓಡಿಹೋದೆ ನಾನು ವೇಷವನ್ನೆಲ್ಲ ತೆಗೆದುಹಾಕಿ ಈಚೆಗೆ ಬಂದೆ" ಎಂದು ಕೆಳಗೆ ಕುಳಿತುಕೊಂಡನು ಕಮಲಮ್ಮನು, "ಈ ಮನೆಯಲ್ಲಿ ಒಂದು ಬೀಸಣಿಗೆಯಾದರೂ ಇದೆಯೇ!" ಎಂದುಕೊಂಡು, ಒಂದು ಕಾಗದದ ರಟ್ಟನ್ನು ತಂದು ಗಂಡನಿಗೆ ಗಾಳಿಯನ್ನು ಬೀಸತೊಡಗಿದಳು ರಾಮಯ್ಯನಿಗೆ ವಿಸ್ಮಯವಾಯಿತು ಅವನು ಎಣಿಸಿದ್ದುದೇ ಒಂದು, ಇಲ್ಲಿ ನಡೆದುದೇ ಒಂದು ದೇವರೊಬ್ಬನಿದ್ದಾನೆಂಬುದನ್ನು ನಾವು ಮರೆಯುವುದೇ ಇಂತಹ ಸನ್ನಿವೇಶಗಳಲ್ಲಿ ರಾಮಯ್ಯನು ಲಕ್ಷ್ಮಿಯಿಂದ ಸೇವಿಸಲ್ಪಡುತ್ತಿರುವ ಶೇಷಶಾಯಿ ಶ್ರೀಮನ್ನಾರಾಯಣನು ತಾನೇ ಆಗಿರಬೇಕೆಂದು ಆಗ ಭಾವಿಸಿಕೊಂಡನೋ ಏನೋ ಹೇಳಬಲ್ಲವರಾರು?

ಎಲೆಯ ಮುಂದೆ ಕುಳಿತಾಗ, ತನಗೆ ಹಬ್ಬದ ಊಟ ಸಿದ್ಧವಾಗಿದ್ದುದನ್ನು ನೋಡಿ, ರಾಮಯ್ಯನ ಆಶ್ಚರ್ಯವು ಮತ್ತಷ್ಟು ಹೆಚ್ಚಾಯಿತು ಹಬ್ಬದ ಅಡಿಗೆಗೇನು ಕಾರಣವೆಂದು ಅವನು ಕೇಳಿದನು ಸರಳ ಹೃದಯೆಯಾದ ಆ ನವ ಯುವತಿಯು, "ಭಕ್ತರು ಪೂಜೆಯಿಂದಲ್ಲವೆ ದೇವರನ್ನು ಒಲಿಸಿಕೊಳ್ಳಬೇಕು!" ಎಂದು ಹೇಳಿ ಸ್ವಲ್ಪ ನಕ್ಕಳು ಅಲ್ಲದೆ, "ನೀವು ಎಲ್ಲಿಗೆ ಹೋಗಿದ್ದಿರಿ? ಇಷ್ಟೇಕೆ ಹೊತ್ತಾಯಿತು?" ಎಂದಳು ನಲ್ಲಳ ಮಧುರಾಲಾಪವನ್ನು ಕೇಳಿ ರಾಮಯ್ಯನಿಗೆ ಒಮ್ಮೆಗೆ ಇಮ್ಮೆಯಾದಂತೆ ತೋರಿತು ಅವನು, "ಇಷ್ಟು ಶ್ರೀರಂಗ ನೀತಿಯನ್ನು ಹೇಳುವವಳು ನಿನ್ನೆ ಜಾರಿಬಿದ್ದೆಯಲ್ಲಾ!" ಎಂದನು ಕಮಲಮ್ಮನು ಗತ್ತಿನಿಂದ ಕೊರಳನ್ನು ಕೊಂಕಿಸಿ, "ಹೌದು ಜಾರಿಬಿದ್ದೆ ನಡೆಯೋಕಾಲು ಜಾರಿಯೂ ಜಾರುತ್ತೆ, ಎಡವಿಯೂ ಎಡವುತ್ತೆ ನಾನೇನು ಹುಳಿಯನ್ನದ ವಾಸನೆಯನ್ನು ಕುಡಿಯುತ್ತ ದೇವಸ್ಥಾನದಲ್ಲಿ ಕೂತಿರುವ ಬಣ್ಣದ ಗರುಡನೆಂದು

ತಿಳಿದುಕೊಂಡಿರಾ? ಅವನಾದರೋ ರೆಕ್ಕೆಯನ್ನು ಹರಡಿದ್ದರೂ, ಹಾರುವುದಿಲ್ಲ; ಕಾಲನ್ನು ನೀಡಿದ್ದರೂ ಎಡುವುವುದಿಲ್ಲ ನಾನು ಜಾರುವ ಹೊತ್ತಿಗೇ ಮತ್ತೆ ಇವತ್ತು ನಿಮ್ಮ ಬಾಯಿ ಸೀಯಾಯಿತು" ಎಂದು ಹೇಳಿ ಮೃದು ಮಧುರವಾಗಿ ನಕ್ಕಳು, ರಾಮಯ್ಯನೂ ನಕ್ಕನು ಅಲ್ಲದೆ, ಸಾಹುಕಾರರ ಮನೆಗೆ ಒಂದು ಒಳ್ಳೆಯ ಸೀರೆಯನ್ನು ತರುವುದಕ್ಕಾಗಿ ತಾನು ಪೇಟೆಗೆ (ಎಂದರೆ, ಐದು ಮೈಲಿಗಳ ದೂರದಲ್ಲಿದ್ದ ಪಟ್ಟಣಕ್ಕೆ) ಹೋಗಿದ್ದೆನೆಂದು ಹೇಳಿದನು ಕಮಲಮ್ಮನು, "ಸೀರೆ ಇಲ್ಲಿದೆಯೇ?" ಎಂದು ಆತುರದಿಂದ ಕೇಳಿದಳು ರಾಮಯ್ಯನು ಇದೆಯೆಂದು ಸೂಚಿಸಲು ತಲೆಯಾಡಿಸಿದನು ಸೀರೆಯನ್ನು ಕಣ್ಣುಗಳಿಂದ ನೋಡಿಯಾದರೂ ತೃಪ್ತಿಪಡಬೇಕೆಂದು ಕಮಲಮ್ಮನಿಗೆ ಆಸೆಯಾಗಿ ಅವಳು ಮಿಂಚಿನ ವೇಗದಲ್ಲಿ ಊಟವನ್ನು ಮುಗಿಸಿದಳು

ಆ ಸೀರೆಯು ಮೇಘ ವರ್ಣದ ಸೀರೆ, ಧರ್ಮವರದ ಸೊಗಸಾದ ರೇಷ್ಮೆಯ ಸೀರೆ ಸೀರೆಯ ಸೊಗಸನ್ನು ನೋಡಿ ಕಮಲಮ್ಮನು ಬೆರಗಾದಳು; ಅದನ್ನು ಎಷ್ಟು ಸಾರಿ ಹೇಗೆ ನೋಡಿದರೂ ಅವಳಿಗೆ ತೃಪ್ತಿಯಿಲ್ಲ; ಸೀರೆಯನ್ನೇ ನುಂಗಿ ಬಿಡುವಳೋ ಎನ್ನುವಂತೆ ಅದನ್ನು ನೋಡುತ್ತಿದ್ದಳು. ರಾಮಯ್ಯನು, "ಈ ಸೀರೆಯು ನಿನಗಿದ್ದಿದ್ದರೋ?" ಎಂದು ಕೇಳಿದನು ಅದಕ್ಕೆ ಕಮಲಮ್ಮನು, "ಆಗ ನಾನು ದೇವಲೋಕದ ಹೆಂಗಸೇ ಆಗಿ ಬಿಡುತ್ತಿದ್ದೆ" ಎಂದು ತಟಕ್ಕನೆ ಉತ್ತರ ಹೇಳಿದಳು ರಾಮಯ್ಯನು ತನ್ನ ಜೇಬಿನಿಂದ ಒಂದು "ಜಾಕೀಟು" ತೆಗೆದು, "ಇದನ್ನೂ, ಈ ಸೀರೆಯನ್ನೂ ನಿನಗೋಸ್ಕರವೇ ತಂದಿದ್ದೇನೆ ಜಾಕೀಟು ಹೊಲಿಸಿಕೊಂಡು ಬರುವುದಕ್ಕೇ ಇಷ್ಟು ಹೊತ್ತಾದದ್ದು" ಎಂದು ಹೇಳಿದನು. ಕಮಲಮ್ಮನಿಗೆ ಮೈಯೆಲ್ಲಾ ಕಿವಿಯಾಯಿತು ಅವಳು ಅವನ ಮಾತನ್ನೇ ನಂಬಳು ಅವನು ಕಷ್ಟದಿಂದ ಹೇಗೋ ಅವಳಿಗೆ ನಂಬಿಕೆಯನ್ನುಂಟು ಮಾಡಿ, ವೀಳೆಯದೆಲೆಯನ್ನು ತರಲು ಅಂಗಡಿಗೆ ಹೋದನು.

ಅವನು ಮನೆಗೆ ಬರುವ ವೇಳೆಗೆ ಕಮಲಮ್ಮನು ಹೊಸ ಸೀರೆಯನ್ನುಟ್ಟು ಹೂ ಮುಡಿದು ನಿಂತಿದ್ದಳು. ದಂಪತಿಗಳು ವೀಳೆಯನ್ನು ಹಾಕಿ

ಕೊಂಡರು ಅಂದು ಅವಳಿಗೆ ಶಾಕುಂತಲ ನಾಟಕದಲ್ಲಿ ಬಹುಮಾನದ ಹಣವನ್ನು ಕಂಡ ಬೆಸ್ತನ ಅವಸ್ಥೆ: ಅವಳು ಸೀರೆಯು ತನ್ನದೆಂದು ನಂಬಲಾರಳು, ನಂಬದೆಯೂ ಇರಲಾರಳು ಕೊನೆಗೆ ಅವಳು "ಈ ಸೀರೆಗೂ ಈ ಜಾಕೀಟಿಗೂ ಸುರಿಯಲು ಒಂದು ಬೊಗಸೆಯಷ್ಟು ಹಣವನ್ನು ಎಲ್ಲಿಂದ ತಂದಿರಿ?" ಎಂದು ಕೇಳಿದಳು

ರಾಮಯ್ಯನು ತನ್ನ ವೈದ್ಯದಿಂದ ಉಪಯೋಗಹೊಂದಿದ ಕೆಲವರು ಕೊಡುತ್ತಿದ್ದ ಹಣದಲ್ಲಿ ಸ್ವಲ್ಪ ಸ್ವಲ್ಪ ಭಾಗವನ್ನು ಕೂಡಿಡುತ್ತಿದ್ದನು ಒಂದು "ಬೈಸಿಕಲ್ಲನ್ನು" ತೆಗೆದುಕೊಂಡು ವಿರಾಮ ಕಾಲದಲ್ಲಿ ದೂರದ ಹಳ್ಳಿಗಳಿಗೆಲ್ಲ ಹೋಗಿ, ರೋಗಿಗಳಿಗೆ ಔಷಧವನ್ನು ಕೊಟ್ಟು ಪರೋಪಕಾರವನ್ನೂ ಸ್ವಕಾರ್ಯವನ್ನೂ, ಎರಡನ್ನೂ ಸಾಧಿಸಬೇಕೆಂಬುದು ಅವನ ದೂರದ ಆಶೆ ಅದಕ್ಕಾಗಿ ಅವನು ಗೋಪ್ಯವಾಗಿ ಹಣವನ್ನು ಕೂಡಿಡುತ್ತಿದ್ದನು ಆ ಹಣದಿಂದ ಈಗ ಅವನು ಸೀರೆಯನ್ನೂ ಜಾಕೀಟನ್ನೂ ಕೊಂಡು ತಂದಿದ್ದನು ಆ ಸಂಗತಿಯನ್ನು ಅವನು ಕಮಲಮ್ಮನಿಗೆ ತಿಳಿಸಿದ ಕೂಡಲೆ ಅವಳು ತನ್ನ ಗಂಡನಿಗಾಗಿ ಕಟ್ಟಿದ್ದ ಹೂವಿನ ದಂಡೆಯನ್ನು ತಂದು ಪ್ರೀತಿಯಿಂದ ಅವನ ಕೊರಳಿಗೆ ಹಾಕಿ, ತನ್ಮೂಲಕ ತನ್ನ ಮನೋಭಾವವನ್ನು ಸ್ವಲ್ಪಮಟ್ಟಿಗೆ ತೋರ್ಪಡಿಸಿದಳು ಏಕೆಂದರೆ, ಅವಳ ಮುಖವನ್ನು ನೋಡಿ ಆ ಭಾವವನ್ನು ಗ್ರಹಿಸಬೇಕಾಗಿದ್ದಿತೇ ಹೊರತು, ಮತ್ತಾವುದರಿಂದಲೂ ಅದನ್ನು ಪೂರ್ತಿಯಾಗಿ ತಿಳಿಯುವುದು ಸಾಧ್ಯವಿರಲಿಲ್ಲ ರಾಮಯ್ಯನು ಆ ಹೂವಿನ ದಂಡೆಯು ತನಗಾಗಿಯೇ ಸಿದ್ಧವಾಗಿದ್ದಿತೆಂಬುದನ್ನು ಕೇಳಿದ ಮೇಲಂತು, ಅವನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು ಅವನು, "ಕೊಂತದ ಹಾಗಿರುವ ನನ್ನ ಕತ್ತಿನಲ್ಲಿರುವುದಕ್ಕಿಂತ ಈ ಹಾರವು ನಿನ್ನ ಕತ್ತಿನಲ್ಲಿರುವುದೇ ಚೆನ್ನು" ಎಂದು ಹೇಳಿ, ಅವಳ ಕೊರಳಿಗೆ ಅದನ್ನು ಹಾಕಿದನು ಅವಳು "ಆಗಲಿ, ನನ್ನ ದೇವರ ಪ್ರಸಾದವನ್ನು ನಾನೇಕೆ ಬೇಡವೆನ್ನಲಿ?" ಎಂದು ಮನೋಹರವಾದ ಮುಗುಳು ನಗೆಯನ್ನು ಸೂಸಿದಳು ಅವಳ ಮುಖಭಾವವನ್ನೂ, ಪಟ್ಟೆಯ ಸೀರೆಗೂ ಶೋಭೆಯನ್ನುಂಟುಮಾಡುತ್ತಿದ್ದ ಅವಳ ಸೌಂದರ್ಯವನ್ನೂ

ನೋಡಿ ರಾಮಯ್ಯನು ಮುಗ್ಧನಾದನು. ಅವನು ಪ್ರೀತಿಯಿಂದ ಅವಳ ಮುಂಗುರುಳನ್ನು ಸವರುತ್ತ, "ಕಮಲ! ರವಿವರ್ಮನು ಮಾತ್ರ ನಿನ್ನನ್ನು ನೋಡಿದ್ದರೆ?" ಎಂದನು ಅವಳು ಚಮಕಿತಳಾಗಿ, "ಅವನೇಕೆ ನನ್ನನ್ನು ನೋಡಬೇಕಾಗಿತ್ತು? ಅವನು ನೋಡಿದ್ದರೇನಾಗುತ್ತಿತ್ತು?" ಎಂದು ಕೇಳಿದಳು ರಾಮಯ್ಯನು, "ರವಿವರ್ಮನು ಮಾತ್ರ ಬದುಕಿದ್ದು, ಈಗ ನಿನ್ನನ್ನು ನೋಡಿದ್ದರೆ, ಉಯ್ಯಾಲೆಯ ಮೇಲೆ ನಿನ್ನನ್ನು ಕೂರಿಸಿ, ನಿನ್ನ ಪಟವನ್ನೇ ಬರೆದು, 'ಲೋಕಮಾತೆಯಾದ ರಾಜರಾಜೇಶ್ವರಿ' ಎಂದು ವಿಳಾಸ ಹಾಕಿಬಿಡುತ್ತಿದ್ದನು" ಎಂದನು ಕಮಲಮ್ಮನು ಆನಂದ ಭರವನ್ನು ತಾಳಲಾರದೆ ಅತ್ತುಬಿಟ್ಟಳು ಅಳುವಿನ ಮಧ್ಯದಲ್ಲಿ, "ನೀ-ವು-ದೇ-ವ-ರಂ-ಥ-ವ-ರು" ಎಂದಳು ರಾಮಯ್ಯನಿಗೆ ಅವಳ ಆಗಿನ ಅಳುವೂ ಸುಖಕರವಾಗಿದ್ದಿತು ಅವನು ಅವಳನ್ನು ಮೈದಡವಿ ಸಂತೈಸಿದನು

ಆ ಬಳಿಕ ಸ್ವಲ್ಪ ಹೊತ್ತು ಕಳೆದ ಮೇಲೆ ರಾಮಯ್ಯನು ತಮ್ಮ ಸಾಹೇಬರ ಮನೆಯ ತಿಂಗಳು ನಾಗವಲಿಗೆ ಹೋಗುವ ಪ್ರಸ್ತಾಪವನ್ನೆತ್ತಿದನು ಕಮಲಮ್ಮನು ಕುಂಕುಮವನ್ನು ಸರಿಮಾಡಿಕೊಳ್ಳುವ ನೆವದಿಂದ ಆಗ ಕನ್ನಡಿಯನ್ನು ನೋಡಿಕೊಳ್ಳುತ್ತಿದ್ದವಳು, "ನೀವು ಇನ್ನೊಂದು ಸಲ ಕರೆದರೆ ಬಂದೇಬಿಡಬೇಕೆಂದು ನಿನ್ನೆಯೇ ನಿರ್ಧರಮಾಡಿಕೊಂಡಿದ್ದೆ, ಅಗತ್ಯವಾಗಿ ಹೋಗೋಣ ನೀವು ಏನೂ ವಿರಸವಾಗಿ ತಿಳಿದುಕೊಳ್ಳಬೇಡಿ ನೀವು ತಂದುಕೊಟ್ಟಿರುವ ಈ ಅಲಂಕಾರದ ಜೊತೆಗೆ ಒಂದೆರಡು ಒಡವೆಗಳಿದ್ದರೆ ಎಷ್ಟೋ ಚೆನ್ನಾಗಿತ್ತು ಅವರ ಮನೆಯ ಹೆಂಗಸರೆಲ್ಲ ನನ್ನನ್ನು ನೋಡಿ ನಗುತ್ತಾರೋ ಏನೋ ಅಂತ ಮನಸ್ಸಿಗೆ ಹೀನಾಯ ಅಲ್ಲಿಗೆ ಹೋಗದೆ ಇದ್ದಿದ್ದರೆ ಈ ಸೀರೆ ಈ ಜಾಕೀಟು, ಇವುಗಳ ಮುಂದೆ ನನಗೆ ಇನ್ನೊಂದೂ ಬೇಕಿರಲಿಲ್ಲ, ಒಂದು ಬೊಗಸೆ ಹಣ ಹಾಕಿ ತಂದಿದ್ದೀರಿ, ಹಿಂದೆ ಮುಂದೆ ನೋಡದೆ ಇನ್ನೂ ಆಶೆಪಡೋಕೆ ನನಗೇನು ಜ್ಞಾನ ವಿಲ್ಲವೆ?" ಎಂದಳು ರಾಮಯ್ಯನು, "ಇದಕ್ಕೇಕೆ ಇಷ್ಟು ಯೋಚನೆ? ಶಾನುಭೋಗರ ಮನೆಗೆ ಹೋಗಿ ಒಂದೆರಡು ಒಡವೆಗಳನ್ನು ಎರವಾಗಿ ತೆಗೆದುಕೊಂಡು ಬಾ. ಅವರಿಗೇನು! ಆಗರ್ಭ ಶ್ರೀಮಂತರು. ಐದಾರು

'ತೊಡಿಗೆ' ಒಡವೆಗಳೇ ಅವರ ಮನೆಯಲ್ಲಿವೆ ಅದಕ್ಕೆ ತಕ್ಕ ಹಾಗೆ ಅವರು ಗುಣವಂತರು ನೀನು ಕೇಳಿದರೆ ರಂಗಮ್ಮನವರು ಇಲ್ಲವೆನ್ನುವುದಿಲ್ಲ" ಎಂದು ಹೇಳಿದನು ಆಗ ಕಮಲಮ್ಮನ ಸಂತೋಷಕ್ಕೆ ಪಾರವುಂಟೆ?

ಶಾನುಭೋಗರ ಮನೆಯಲ್ಲಿ ಐದಾರು 'ತೊಡಿಗೆ' ಒಡವೆಗಳಿದ್ದುದೂ ನಿಜ, ಅವರ ಮನೆಯವರು ಒಳ್ಳೆಯವರಾಗಿದ್ದುದೂ ನಿಜ ಆದರೂ, ಒಡವೆಗಳನ್ನು ಎರಲಾಗಿ ತರಲು ಕಮಲಮ್ಮನು ಅವರ ಮನೆಗೆ ಹೋದ ಸಮಯವು ಮಾತ್ರ ಸರಿಯಾದುದಲ್ಲ ಅವರು ಕಾಶಿಯ ಯಾತ್ರೆಗೆ ಹೊರಡುವವರಾಗಿದ್ದರು ಅವರು ಮತ್ತೆ ಊರಿಗೆ ಬರಲು ಎರಡು ಮೂರು ತಿಂಗಳು ಹಿಡಿಯುವಂತಿದ್ದಿತು ಆದುದರಿಂದ, ಅವರು ತಮ್ಮ ಮನೆಯ ಜವಾಹಿರುಗಳನ್ನೆಲ್ಲ ಪೆಟ್ಟಿಗೆಯಲ್ಲಿಟ್ಟು ಮೊಹರುಮಾಡಿ, ಆ ಪೆಟ್ಟಿಗೆಯು ಜೋಪಾನವಾಗಿರುವುದಕ್ಕಾಗಿ ಅದನ್ನು ಖಜಾನೆಗೆ ಕಳುಹಿಸಿ ಬಿಟ್ಟಿದ್ದರು ಮರು ದಿನವೇ ಅವರು ಪ್ರಯಾಣಮಾಡಬೇಕಾಗಿದ್ದಿತು ಕಮಲಮ್ಮನಿಗೆ ಒಡವೆಗಳನ್ನು ಕೊಡುವುದಕ್ಕಿಲ್ಲವಲ್ಲಾ ಎಂದು ರಂಗಮ್ಮನವರು ಎಷ್ಟೋ ಪೇಚಾಡಿದರು ಕೊನೆಗೆ, ಒಂದು ಪುಟ್ಟ ಪೆಟ್ಟಿಗೆಯನ್ನು ರಂಗಮ್ಮನವರು ಕಮಲಮ್ಮನ ಕೈಗೆ ಕೊಟ್ಟು, "ಈ ಬೆಂಡೋಲೆಯನ್ನು ಮಾತ್ರ ನಾನು ಕೊಡಬಲ್ಲೆ, ಅದನ್ನಿಟ್ಟುಕೋ ತಾಯಿ" ಎಂದು ಹೇಳಿದರು ಕಮಲಮ್ಮನು, "ನೀವು ಕಾಶಿಗೆ ಹೋಗುವ ಸಮಯ, ನಾನು ಇದನ್ನು ಹಿಂತಿರುಗಿ ಕೊಡಬೇಕಾದಾಗ ನೀವು ಇಲ್ಲಿರುವುದಿಲ್ಲ, ಇದು ಬೇಡ" ಎಂದಳು ರಂಗಮ್ಮನವರು, "ಅದಕ್ಕೇನಂತೆ! ನಾವು ಬಂದ ಮೇಲೆ ಕೊಡು, ಅಷ್ಟರಲ್ಲೇನು?" ಎಂದರು ಕಮಲಮ್ಮನು ಅದನ್ನು ತೆಗೆದುಕೊಂಡು ಸಂತೋಷವಾಗಿ ಮನೆಗೆ ಬಂದಳು

ಕಮಲಮ್ಮನಿಗೆ ಆ ಪುಟ್ಟ ಪೆಟ್ಟಿಗೆಯ ಬಾಗಿಲನ್ನು ತೆರೆಯಬೇಕಾದರೆ, ಅದರಲ್ಲಿಯ ಸಣ್ಣ ಹಿತ್ತಾಳೆಯ ಮೊಳೆಯೊಂದನ್ನು ಒತ್ತಬೇಕೆಂಬುದು ತಿಳಿಯದು. ಬೆಂಡೋಲೆಯ ಸೊಗಸನ್ನು ನೋಡಬೇಕೆಂಬ ಆತುರ, ಎಷ್ಟು ಎಳೆದರೂ ಅದರ ಬಾಗಿಲು ತೆರೆಯದು. ಕೊನೆಗೆ ರಾಮಯ್ಯನ ಬುದ್ಧಿವಂತಿಕೆಯಿಂದ ಪುಟ್ಟ ಪೆಟ್ಟಿಗೆಯ ಬಾಗಿಲು ತೆರೆಯಿತು. ಕೊಲಂಬಸನು ಅಮೆರಿಕಾ

ಖಂಡವನ್ನು ಕಂಡುಹಿಡಿದಾಗ ಅವನ ಸಂಗಡಿಗರು ಕಮಲಮ್ಮನಷ್ಟು ಸಂತೋಷಪಟ್ಟಿರಲಾರರು ರಾಮಯ್ಯನು ಆ ಪೆಟ್ಟಿಗೆಯಲ್ಲಿ, ನೀಲಿಯ ಮಕಮಲ್ಲಿನ ಮೆತ್ತೆಯೊಳಗಿನ ಗೂಡಿನಲ್ಲಿದ್ದ ಬೆಂಡೋಲೆಯನ್ನು ನೋಡಿದನು, "ಸೊಗಸಾದ ವಜ್ರದ ಬೆಂಡೋಲೆ" ಎಂದು ಹೇಳಿ ಅದನ್ನು ಕಮಲಮ್ಮನ ಕೈಗೆ ಕೊಟ್ಟನು ಅವಳು ಅದನ್ನು ತಿರುಗಿಸಿ ತಿರುಗಿಸಿ ನೋಡಿದಳು, ಮುಚ್ಚಳದ ಒಳಭಾಗದಲ್ಲಿದ್ದ ಬರೆವಣಿಗೆಯನ್ನು ಕಂಡು, "ಇದೇನು ಇಲ್ಲಿ ಬರೆದಿರೋದು?" ಎಂದಳು ಅದು ಬೆಂಡೋಲೆಯನ್ನು ಮಾಡಿದ ಬೆಂಗಳೂರಿನ ರತ್ನಪಡಿ ವ್ಯಾಪಾರಿಗಳ ಅಂಗಡಿಯ (ಕಂಪೆನಿಯ) ಹೆಸರೆಂದೂ, ಅದರ ಬೆಲೆಯು ೧,೬೫೦ ರೂಪಾಯಿಗಳೆಂದು ಕೂಡ ಅಲ್ಲಿ ಬರೆದಿದೆಯೆಂದೂ ಅವನು ಉತ್ತರ ಹೇಳಿದನು ಅವನು ಸ್ವಲ್ಪ ಇಂಗ್ಲಿಷು ಭಾಷೆಯನ್ನು ಕಲಿತಿದ್ದುದು ಅಂದು ಸಾರ್ಥಕವಾಯಿತು ಒಂದಾನೊಂದು ಕಾಲದಲ್ಲಿ ಅವನೂ, ಕನ್ನಡದಲ್ಲಿ ಲೋವರ್ ಸೆಕೆಂಡರಿ ಪರೀಕ್ಷೆ ಮಾಡಿ, ಇಂಗ್ಲೀಷು ಮೂರನೆಯ ತರಗತಿಯಲ್ಲಿ ಓದುತ್ತಿದ್ದನು ಕಮಲಮ್ಮನು ಬೆಂಡೋಲೆಯನ್ನು ಕಿವಿಗಿಟ್ಟುಕೊಂಡಳು ಕನ್ನಡಿಯಲ್ಲ ಎಷ್ಟು ನೋಡಿಕೊಂಡರೂ ಅವಳಿಗೆ ತೃಪ್ತಿಯಿಲ್ಲ ಪಾದರಸವು ಹೋಗಿ ಅಲ್ಲಲ್ಲಿ ಮಸಕಾಗಿದ್ದ ಆ ಕನ್ನಡಿಯು ಅವಳ ಪ್ರತಿಬಿಂಬವನ್ನೇ ಸರಿಯಾಗಿ ತೋರಿಸದು ಕನ್ನಡಿಯು ಅಲಕ್ಷ್ಯಮಾಡಿದರೂ ಕಮಲಮ್ಮನಿಗೇನೋ ಅಲಕ್ಷ್ಯವಿಲ್ಲ

ಕೊನೆಗೆ ಭಾನುವಾರವು ಓಡಿಯೇ ಬಂದಿತು ರಾಮಯ್ಯನು "ಸಾಹೇಬ"ರಿದ್ದ ಊರಿಗೆ ತನ್ನ ಪತ್ನಿಯೊಡನೆ ಅಂದು ಪ್ರಯಾಣ ಮಾಡಿದನು. ಕಮಲಮ್ಮನಿಗಂತು ಒಡಲೇ ಹಿಡಿಯದಷ್ಟು ಸಡಗರ, ತಿಂಗಳು ನಾಗವಲಿಯ ಮನೆಯ ಹೆಂಗಸರೆಲ್ಲರೂ ಎಷ್ಟು ಹೊತ್ತಿಗೆ ತನ್ನ ಕಿವಿಯ ಬೆಂಡೋಲೆಯನ್ನು ನೋಡುವರೋ ಎಂದು ಕುತೂಹಲ ತನ್ನ ಗಂಡನೊಡನೆ ದಾರಿಯುದ್ದಕ್ಕೂ ಅವಳಿಗೆ ಬೆಂಡೋಲೆಯ ಮಾತೇ ಮಾತು ಅದರ ಹೊಳಪು, ವಜ್ರದಲ್ಲಿ ಕಮಲವನ್ನು ಬಿಡಿಸಿರುವ ಸೀಮೆಯವರ ಜಾಣತನ, ವಜ್ರವೇ ನವರತ್ನಗಳಲ್ಲಿ ಶ್ರೇಷ್ಠ, ವಜ್ರದ ಆಭರಣಗಳು ಬೆಳ್ಳಗಿರುವವರಿಗೂ ಕಪ್ಪಗಿರುವವರಿಗೂ ಕೆಂಪಗಿರುವವರಿಗೂ ಎಲ್ಲರಿಗೂ

ಒಪ್ಪುತ್ತವೆ, ಆದುದರಿಂದಲೇ ವಜ್ರದ ಬೆಲೆ ಹೆಚ್ಚು, ಬೆಂಡೋಲೆಯ ಬೆಲೆ, ಅದನ್ನು ಕೊಂಡಿರುವ ಶಾನುಭೋಗರ ಮನೆಯವರ ಪುಣ್ಯ—ಇತ್ಯಾದಿ, ಪುಂಖಾನು ಪುಂಖವಾಗಿ ಒಂದು ಪುಟ್ಟ ಭಾರತದಷ್ಟು

ತಿಂಗಳು ನಾಗವಲಿಯ ಶಾಸ್ತ್ರವೂ ಊಟ ಉಪಚಾರಗಳೂ ಮುಗಿದುವು ರಾಮಯ್ಯನು ಅಂದು ರಾತ್ರಿಯೇ ಊರಿಗೆ ಹೊರಡುವ ಯೋಚನೆ ಮಾಡಿದನು ಆದರೆ "ಸಾಹೇಬರು" ಅವನನ್ನು ಮಾರನೆಯ ದಿನ ಹೊರಡುವಂತೆ ಬಲವಂತಮಾಡಿ ಉಪಚಾರ ಹೇಳಿದರು ಆದರೂ, ಅವನು ಅದಕ್ಕೆ ಸಮ್ಮತಿಸಲಿಲ್ಲ ಅದರ ಒಳಗುಟ್ಟು ಇಷ್ಟೆ ದೊಡ್ಡಕಡೆಗೆ ತಕ್ಕಂತೆ ಶಾಲು ಸಕಲಾತಿಗಳಿರುವ ಹಾಸಿಗೆ ಮುಂತಾದುವುಗಳಿಲ್ಲವೆಂಬ ಸಂಕೋಚವು ಅವನನ್ನು ಬಾಧಿಸುತ್ತಿದ್ದಿತು ಇದಲ್ಲದೆ, ಆರೇ ಆಣೆಗಳ ಬಾಡಿಗೆಗೆ ಒಂದು ಜೋಡೆತ್ತಿನ ಬಂಡಿಯು, ಕೃಷ್ಣಪಕ್ಷದ ಅಂದಿನ ರಾತ್ರಿಯ ಪ್ರಯಾಣಕ್ಕೆ ಸಿಕ್ಕಿದ್ದಿತು, ಕೂಡು ರಸ್ತೆಯವರೆಗೂ ಅದರಲ್ಲ ಹೋಗಿ ಅಲ್ಲಿಂದಾಚೆಗೆ ಮುಕ್ಕಾಲು ಮೈಲಿ ನಡೆದುಹೋದರೆ ರಾಮಯ್ಯನ ಊರು

ರಾಮಯ್ಯನೂ ಕಮಲಮ್ಮನೂ ಸಮ ರಾತ್ರಿಯು ಕಳೆದ ಸ್ವಲ್ಪ ಹೊತ್ತಿನ ವೇಳೆಗೆ ಮನೆಯನ್ನು ಸೇರಿದರು, ಬೆಂಡೋಲೆಯನ್ನಿಡುವ ಪೆಟ್ಟಿಗೆಯು ಗೂಡಿನಲ್ಲದ್ದಿತು ಅದನ್ನು ನೋಡಿದುದರಿಂದಲೋ, ಅಥವಾ ಮತ್ತಾವ ಕಾರಣದಿಂದಲೋ ಕಮಲಮ್ಮನು ಕಿವಿಯನ್ನು ಮುಟ್ಟಿ ನೋಡಿಕೊಂಡಳು, ಅದರಲ್ಲ ಬೆಂಡೋಲೆಯಿರಲಿಲ್ಲ ಅವಳಿಗೆ ದಿಕ್ಕೇ ತೋರದಂತಾಯಿತು, ರಾಮಯ್ಯನಿಗೂ ದಿಗ್ಭ್ರಮೆ ಹಿಡಿಯಿತು "ಬೆಂಡೋಲೆಯನ್ನು ಕಿವಿಯಿಂದೇನಾದರೂ ತೆಗೆದಿದ್ದೆಯಾ?" ಎಂದು ಅವನು ಕೇಳಿದನು "ಅವರ ಮನೆಯಿಂದ ಹೊರಡುವಾಗ ಮದುವಣಗಿತ್ತಿಯೂ ಮನೆಯ ಯಜಮಾನಿಯೂ ಅದನ್ನು ನೋಡಬೇಕು ಎಂದರು, ತೆಗೆದು ಕೊಟ್ಟೆ, ತಿರುಗಿ ಇಟ್ಟುಕೊಂಡೆ, ತಿರುಪು ಸರಿಯಾಗಿ ತಿರುಗಿಸಿದೆನೋ ಇಲ್ಲವೋ ಕಾಣೆ ಹೊರಡುವ ಅವಸರ ಎರಡು ಕಿವಿಗಳಲ್ಲಿಯೂ ಓಲೆಯಿಲ್ಲ ಏನು ಗ್ರಹಚಾರವೊ!" ಎಂದು ಅವಳು ಉತ್ತರ ಹೇಳಿದಳು

ಬೆಂಡೋಲೆಯು ಬಂಡಿಯಲ್ಲೇನಾದರೂ ಬಿದ್ದಿದ್ದರೆ ನೋಡಿಕೊಂಡು ಬರೋಣ

ವೆಂದು ರಾಮಯ್ಯನು ಹೊರಟುಹೋದನು. ಕಮಲಮ್ಮನು ಸ್ವಲ್ಪ ಹೊತ್ತು ಏನೂ ತೋರದೆ ಸುಮ್ಮನೆ ಕುಳಿತಿದ್ದಳು, ಬಳಿಕ ಗಳಗಳನೆ ಅಳುತ್ತ, ತನ್ನ ಅಜಾಗರೂಕತೆಯನ್ನು ವಿಧವಿಧವಾಗಿ ಹಳಿದುಕೊಂಡಳು. ಬೆಂಡೋಲೆಯು ಸಿಕ್ಕಿದರೆ ಬಗೆಬಗೆಯಾಗಿ ಸೇವೆ ಮಾಡಿಸುವೆನೆಂದು ಎಲ್ಲ ದೇವರುಗಳಿಗೂ ಹರಕೆಮಾಡಿಕೊಂಡಳು, ಈ ಸಾರಿ ಬೆಂಡೋಲೆಯು ಸಿಕ್ಕಿಬಿಟ್ಟರೆ, ಇನ್ನು ಎಂದೆಂದಿಗೂ ಒಡವೆಗೆ ಆಸೆಪಡುವುದಿಲ್ಲವೆಂದು ನಿರ್ಧಾರ ಮಾಡಿಕೊಂಡಳು. ರಾಮಯ್ಯನು ಬೆಳಗಿನ ಜಾವದ ವೇಳೆಗೆ ಹಿಂದಕ್ಕೆ ಬಂದನು, ಬೆಂಡೋಲೆಗಳು ಸಿಕ್ಕಲಿಲ್ಲ. ದಿನದಮೇಲೆ ದಿನವು ಕಳೆದುಹೋಯಿತು. ಎಂಟು ದಿನಗಳು ಕಳೆದುವು, ಹತ್ತು ದಿನಗಳೂ ಕಳೆದುವು. ಎಲ್ಲೆಲ್ಲಿ ಹುಡುಕಿದರೂ ಬೆಂಡೋಲೆಗಳು ಮಾತ್ರ ಸಿಕ್ಕಲಿಲ್ಲ.

ದಂಪತಿಗಳಿಬ್ಬರೂ ಮುಂದಣ ಕರ್ತವ್ಯವನ್ನು ನಿರ್ಧರಿಸಿಕೊಂಡರು. ಒಡವೆಯು ಹೋದುದನ್ನು ಯಾರಿಗೂ ತಿಳಿಸದೆ, ಮತ್ತೊಂದು ಜೊತೆ ಬೆಂಡೋಲೆಯನ್ನು ತಂದುಕೊಟ್ಟು ಮಾನವನ್ನು ಉಳಿಸಿಕೊಳ್ಳಬೇಕೆಂದು ಅವರು ತೀರ್ಮಾನಮಾಡಿದರು. ಹಾಗೆ ಮಾಡದೆ ಹೋದರೆ ಪೋಲೀಸಿನವರವರೆಗೂ ದೂರು ಹೋಗಿ, ಮುಂದೆ ಬಹಳ ರಗಳೆಗಿಡುವುದೆಂಬ ಭಯ. ಆದರೆ ಹಣವೆಲ್ಲಿಂದ ಬರಬೇಕು? ರಾಮಯ್ಯನಿಗೆ ಅವನ ಊರಿನಲ್ಲೊಂದು ಗದ್ದೆಯಿದ್ದಿತು. ಅದರಿಂದ ಬರುತ್ತಿದ್ದ ಬತ್ತವನ್ನು ಮಾರಿ ಪ್ರತಿವರ್ಷವೂ, ಅವನು ಬಟ್ಟೆಬರೆಗೆ ಹಣವನ್ನು ಒದಗಿಸಿಕೊಳ್ಳುತ್ತಿದ್ದನು, ಈಗ ನಿರ್ವಾಹವಿಲ್ಲದೆ, ಊರಿಗೆ ಹೋಗಿ ಅದನ್ನು ಮಾರಿ ಬರಬೇಕೆಂದು ನಿಷ್ಕರ್ಷೆ ಮಾಡಿ ಹಾಗೆಯೇ ಮಾಡಿದನು. ಆದರೆ, ಅದರಿಂದ ಎಂಟು ನೂರ ಐವತ್ತು ರೂಪಾಯಿಗಳು ಮಾತ್ರ ಒದಗಿದುವು. ಉಳಿದ ರೂಪಾಯಿಗಳನ್ನೊದಗಿಸಿಕೊಳ್ಳುವುದಕ್ಕಾಗಿ ರಾಮಯ್ಯನು ತನಗೆ ಸಾಲಕೊಡತಕ್ಕವರಲ್ಲೆಲ್ಲ ದೊರೆಯುವಷ್ಟು ಹಣವನ್ನೂ ಸಾಲಮಾಡಿದನು, ಸರ್ವ ಪ್ರಯತ್ನ ಮಾಡಿದರೂ ಸಾಕಾದಷ್ಟು ಹಣವು ಒದಗಲಿಲ್ಲ. ಕಮಲಮ್ಮನು, "ಏನಾದರೂ ಮಾಡಿಬಿಡಿ, ಆಗಲೆ ಎಷ್ಟೋ ದಿನಗಳಾದುವು. ಶಾನುಭೋಗರ ಮನೆಯವರು ಊರಿಗೆ ಬರುವ ಕಾಲ. ಮಾನವೊಂದು ಉಳಿದರ ಅರಹೊಟ್ಟೆಯಾದರೂ

ಊಟಮಾಡಿ ಸಾಲವನ್ನು ತೀರಿಸೋಣ'' ಎಂದಳು ಕೊನೆಗೆ ಅವನಿಗೆ ದೊರೆತುದು ಸಾವಿರದ ನಾನ್ನೂರ ಎಪ್ಪತ್ತೈದು ರೂಪಾಯಿಗಳು ಮಾತ್ರವೇ. ಅಲ್ಲಿಗೂ ಆರು ನೂರಕ್ಕೆ ಹೆಚ್ಚಾಗಿ ಸಾಲವಾಯಿತು. ಇನ್ನು ಒಂದು ರೂಪಾಯಿ ಸಾಲವೂ ಹುಟ್ಟುವಂತಿರಲಿಲ್ಲ ಕೊನೆಗೆ ಅಷ್ಟೇ ಹಣಕ್ಕೆ ಬೆಂಡೋಲೆಯನ್ನು ತರಬೇಕೆಂದು ಗೊತ್ತಾಯಿತು ಅಷ್ಟು ದೊಡ್ಡ ವ್ಯಾಪಾರಕ್ಕೆ ಹೊರಟಮೇಲೆ, ಉತ್ತಮವಾದ ಉಡುಪುಗಳಿಲ್ಲದೆ ಹೋದರೆ ಏನಾದರೂ ತೊಂದರೆಯಾದೀತೆಂದು ಬಗೆದು, ರಾಮಯ್ಯನು ತನ್ನ ಆಪ್ತರಿಂದ ಕೆಲವು ಬಟ್ಟೆಗಳನ್ನು ಎರವಾಗಿ ತೆಗೆದುಕೊಂಡು ಬೆಂಗಳೂರಿಗೆ ಹೋದನು ಹೋಗುವಾಗ ಬೆಂಡೋಲೆಯ (ಬರಿಯ) ಪೆಟ್ಟಿಗೆಯನ್ನೂ ಜೊತೆಯಲ್ಲಿ ತೆಗೆದುಕೊಂಡು ಹೋದನು ಅವನು ಬೆಂಗಳೂರಿನಿಂದ ಬಂದ ಒಂದೆರಡು ದಿನಗಳಲ್ಲಿಯೇ ಶಾನುಭೋಗರ ಮನೆಯವರು ಕಾಶಿಯಿಂದ ಬಂದರು ಕಮಲಮ್ಮನು ಯಥಾ ಕಾಲದಲ್ಲಿ ಬೆಂಡೋಲೆಯನ್ನು ಅವರಿಗೆ ಕೊಟ್ಟುಬಿಟ್ಟಳು ಹೊಸ ಬೆಂಡೋಲೆಯು ಬೆಲೆಯಲ್ಲಿ ಹಳೆಯದಕ್ಕಿಂತ ಸ್ವಲ್ಪ ಕಿರಿದಾದುದರಿಂದ ಗುಟ್ಟು ಬಯಲಿಗೆ ಬಿದ್ದು ಏನು ತೊಂದರೆಯಾಗುವುದೋ ಎಂದು ಅವಳಿಗೆ ಕಳವಳ ರಂಗಮ್ಮನವರು, ''ಇದಕ್ಕೇನು ಅವಸರವಾಗಿತ್ತೆ ತಾಯಿ!'' ಎಂದು ಹೇಳಿ, ಪೆಟ್ಟಿಗೆಯನ್ನೇ ತೆಗೆಯದೆ, ಅದನ್ನು ''ಸಂದೂಕ''ಕ್ಕೆ ಸೇರಿಸಿದರು ದೇವರೇ ಸಹಾಯ ಮಾಡಿದನೆಂದುಕೊಂಡು ಕಮಲಮ್ಮನು ಮನೆಗೆ ಬಂದಳು

ಹೆಚ್ಚು ಹನ್ಯಾಸಕ್ಕೆ ಹೋಗದೆ, ಎರಡು ಮುದ್ದು ಹಕ್ಕಿಗಳಂತೆ ಉಲ್ಲಾಸವಾಗಿ ಕಾಲ ಕಳೆಯುತ್ತಿದ್ದ ಆ ದಂಪತಿಗಳಿಗೆ ತಾವೇ ಮಾಡಿಕೊಂಡ ಅಚಾತುರ್ಯದ ದೆಸೆಯಿಂದ, ಅಂದಿನಿಂದ ಕಷ್ಟಾನುಭವವು ಪ್ರಾರಂಭವಾಯಿತು ಕೊನೆಗಾಣದ ಕಾರ್ಪಣ್ಯ ಜೀವನವು ಅವರನ್ನು ಹುರುಳುಗೆಡಿಸಲುಪಕ್ರಮಿಸಿತು ರಾಮಯ್ಯನು ಬಂದ ಸಂಬಳವನ್ನೆಲ್ಲ ಸಾಲಗಾರರಿಗೆ ಕೊಟ್ಟು, ವೈದ್ಯದಿಂದ ಬರುತ್ತಿದ್ದ ಅಲ್ಪ ಸ್ವಲ್ಪ ಆದಾಯದಿಂದ ಜೀವನವನ್ನು ನೂಕಬೇಕಾಯಿತು. ತಾಯಿತಂದೆಗಳಿಂದ ಕೂಡ ಬೈಗುಳನ್ನು ಕೇಳದೆ ಇದ್ದ ಆ ಸರಳ ಜೀವಿಯು ಸಾಲಗಾರರ ಬಿರುನುಡಿ

ಗಳಿಲ್ಲವನ್ನೂ ಮೌನದಿಂದ ಸಹಿಸಬೇಕಾಯಿತು ಅದನ್ನು ನೋಡಿ ಕಮಲಮ್ಮನು ಮರಣಯಾತನೆಯನ್ನನುಭವಿಸುತ್ತಿದ್ದಳು ತಾನೇ ಅದೆಲ್ಲಕ್ಕೂ ಕಾರಣಳೆಂದು ಬಗೆದು, ಅವಳು ತನ್ನ ಹೃದಯವನ್ನೇ ಹಿಂಡಿಕೊಳ್ಳುತ್ತಿದ್ದಳು.

ಒಂದು ದಿನ ಕಮಲಮ್ಮನು ಅಂಗಳದಲ್ಲಿದ್ದ ಒಂದು ಗುಲಾಬಿಯ ಗಿಡದ ಬಳಿಯಲ್ಲಿ ನಿಂತಿದ್ದಳು ಅದರಲ್ಲಿ ಎರಡು ಹೂಗಳು ಅರಳಿದ್ದುವು. ಪಚ್ಚೆಯ ಹಾಸಿಗೆಯಂತಿದ್ದ ಹಸಿರು ಹುಲ್ಲಿನ ಮಧ್ಯದಲ್ಲಿ ದಟ್ಟವಾಗಿದ್ದ ಹಸಿರೆಲೆಗಳಿಂದ ಕೂಡಿ, ಸೊಂಪಿನಿಂದ ಮಟ್ಟಸವಾಗಿ ಬೆಳೆದಿದ್ದ ಗಿಡ ಅದರಮೇಲೆ ತನಿಗಂಪಿನಿಂದ ಕೂಡಿ ಸೊಗಸಾಗಿ ಅರಳಿದ್ದ ಎರಡು ಗುಲಾಬಿಯ ಹೂಗಳು. ತಾವು ಸಮೀಪವರ್ತಿಗಳಾಗಿ ನಿಂತಿರುವುದೆ ಒಂದು ಸೊಬಗೆಂದು ಆನಂದದಿಂದ ಸಾರಿ ತಲೆದೂಗುತ್ತಿವೆಯೋ ಎಂಬಂತೆ, ಗಾಳಿಗೆ ಸ್ವಲ್ಪ ಸ್ವಲ್ಪ ಅಲುಗಾಡುತ್ತ, ಕಣ್ಣನ್ನು ಸೂರೆಗೊಳ್ಳುತ್ತಿರುವ ಎರಡು ಗುಲಾಬಿಯ ಹೂಗಳು ಮನುಷ್ಯರಂತೆ ಮಾತನಾಡುವ ಭಾಗ್ಯವಿಲ್ಲದಿದ್ದರೂ, ಆನಂದ ಭರವನ್ನು ತಾಳಲಾರದೆ ಮೌನವಾಗಿದ್ದು, ಹೃದಯವನ್ನೇ ಬಿಚ್ಚಿತೋರಿಸುವಂತಿದ್ದ ಎರಡು ಗುಲಾಬಿಯ ಹೂಗಳು ಕಮಲಮ್ಮನು ಅವುಗಳನ್ನೇ ದೃಷ್ಟಿಸಿ ನೋಡುತ್ತ, ಚಿತ್ರದಲ್ಲಿ ಬರೆದ ಬೊಂಬೆಯಂತೆ ನಿಂತಿದ್ದಳು ಅವಳ ಮನಸ್ಸು ಎಲ್ಲಿಯೋ ತೇಲಿಹೋಯಿತು ಆ ಹೂಗಳು ಕೂಡ ತನ್ನ ಅವಿವೇಕವನ್ನು ಹಳಿದು ಹಾಸ್ಯಮಾಡುತ್ತಿದ್ದಂತೆ ಅವಳ ಮನಸ್ಸಿಗೆ ತೋರಿತು ತಾನೂ ಕಷ್ಟದಲ್ಲಿ ಸಿಕ್ಕಿ, ತನ್ನ ಗಂಡನನ್ನೂ ಕಷ್ಟದಲ್ಲಿ ಮುಳುಗಿಸಿದುದಕ್ಕಾಗಿ ಅವಳು ತನ್ನನ್ನು ಮನವಾರೆ ನಿಂದಿಸಿಕೊಳ್ಳುತ್ತಿದ್ದಳು ಆ ವೇಳೆಗೆ ಸರಿಯಾಗಿ ರಾಮಯ್ಯನು ಒಂದು ಕಾಗದವನ್ನು ಹಿಡಿದುಕೊಂಡು ಒಳಗಿನಿಂದ ಬಂದು, "ಇದು ನೋಡು, ನಮ್ಮಯ್ಯನ ಅಕ್ಷರ, ಎಷ್ಟು ಸೊಗಸಾಗಿ ಮುತ್ತು ಪೋಣಿಸಿದ ಹಾಗಿದೆ, ನೋಡು ಬಾ-" ಎಂದನು ಯಾವುದೋ ಒಂದು ಕಷಾಯದ ದಿನಸುಗಳ ಪಟ್ಟಿಯನ್ನು ಹುಡುಕುವುದಕ್ಕಾಗಿ ಅವನು ಕಾಗದ ಪತ್ರಗಳನ್ನು ಗೂರಾಡಿಕೊಂಡು ನೋಡುತ್ತಿರುವಲ್ಲಿ ಆ ಕಾಗದವು ಸಿಕ್ಕಿತು ತಮ್ಮ ತಂದೆಯ ಅಕ್ಷರದ ಸೊಗಸನ್ನು ಹೆಂಡತಿಗೆ ತೋರಿಸುವುದಕ್ಕಾಗಿ ಅವನು ಹೆಮ್ಮೆಯಿಂದ

ಅದನ್ನು ಈಚೆಗೆ ತಂದನು ಕಮಲಮ್ಮನು ಕನಸಿನ ಪ್ರಪಂಚದಲ್ಲಿದ್ದವಳ ಹಾಗೆ ಅಕ್ಷರಗಳನ್ನು ನೋಡಿ "ಚೆನ್ನಾಗಿದೆ, ಇಲ್ಲಿ ಬರೆದಿರುವ ಶ್ಲೋಕದ ಅರ್ಥವೇನು?" ಎಂದಳು ಅದಕ್ಕೆ ರಾಮಯ್ಯನು, ತಮ್ಮ ತಂದೆಯ ಅಕ್ಷರವು ಚೆನ್ನಾಗಿರುವುದನ್ನು ಅವಳೂ ಒಪ್ಪಿದಳೆಂಬುದನ್ನು ನೆನೆದು ಮತ್ತಷ್ಟು ಹೆಮ್ಮೆಯಿಂದ ಉಬ್ಬಿ "ಅರ್ಥವೂ ಕೆಳಗೆ ಬರೆದಿದೆ, ಓದಿಕೊ" ಎಂದು ಉತ್ತರ ಹೇಳಿದನು ಕಮಲಮ್ಮನು ಓದಿಕೊಂಡಳು

ಸ್ತ್ರಿಯೋಹಿ ಮೂಲಂ ಕಲಹಸ್ಯ ಪುಂಸಾಂ ।
ಸ್ತ್ರಿಯೋಹಿ ಮೂಲಂ ನಿಧನಸ್ಯ ಪುಂಸಾಂ ॥
ಸ್ತ್ರಿಯೋಹಿ ಮೂಲಂ ವಿಭವಸ್ಯ ಪುಂಸಾಂ ।
ಸ್ತ್ರಿಯೋಹಿ ಮೂಲಂ ಸಕಲಸ್ಯ ಪುಂಸಾಂ ॥

"ಪುರುಷರ ಕಲಹಕ್ಕೆ ಸ್ತ್ರೀಯರೇ ಮೂಲ, ಪುರುಷರ ಮರಣಕ್ಕೆ ಸ್ತ್ರೀಯರೇ ಮೂಲ. ಪುರುಷರ ವಿಭವಕ್ಕೂ ಸ್ತ್ರೀಯರೇ ಮೂಲ, ಪುರುಷರ ಸರ್ವಸ್ವಕ್ಕೂ ಸ್ತ್ರೀಯರೇ ಮೂಲ" ಎಂದು ಅದರಲ್ಲಿ ಬರೆದಿದ್ದಿತು. ತನ್ನನ್ನು ಹೀಯಾಳಿಸುವುದಕ್ಕಾಗಿ ಗಂಡನು ಅದನ್ನು ತನಗೆ ತೋರಿಸಿರಬೇಕೆಂದು ಕಮಲಮ್ಮನು ನಿರ್ಧರಿಸಿ, "ನನ್ನ ತಲೆಯನ್ನು ನಾನೇ ತಿಂದುಕೊಳ್ಳುತ್ತಿದ್ದೇನೆ, ಮಾಡಬಾರದ್ದನ್ನು ಮಾಡಿದೆ, ಅದೇನೋ ನಿಜ. ಕೊನೆಗೆ ನೀವೂ ನನ್ನ ಭಾಗಕ್ಕೆ ಹೀಗಾಗಬೇಕೆ?" ಎಂದು ಹೇಳಿ ಅಳತೊಡಗಿದಳು ತನ್ನ ಅಭಿಪ್ರಾಯವು ಖಂಡಿತವಾಗಿಯೂ ಅದಲ್ಲವೆಂದು ರಾಮಯ್ಯನು ಎಷ್ಟು ಸಮಾಧಾನವನ್ನು ಹೇಳಿದರೂ ಅವಳಿಗೆ ನಂಬಿಕೆಯಾಗಲಿಲ್ಲ. ಅವಳು ಅಳುತ್ತಲೇ ಇದ್ದಳು ಆ ವೇಳೆಗೆ ಓಣಿಯ ಮನೆಯ ವೆಂಕಮ್ಮನು ಬಂದು, "ನೀವು ಹೇಳಿದ್ದ ಏಳುಸುತ್ತಿನ ಮಲ್ಲಿಗೆ ಕೊನೆ ಕೊಡ್ತಿರೇನ್ರೀ ಕಮಲಮ್ಮನೋರೇ" ಎಂದು ಬೀದಿಯ ನಡುವೆಯಿಂದಲೇ ಕೂಗಿ ಕೇಳಿದಳು ಕಮಲಮ್ಮನು ಬೇಗ ಕಣ್ಣೊರಸಿಕೊಂಡು ಆಕೆಯನ್ನು ಕರೆದುಕೊಂಡು ಬರಲು ಹೊರಟುಹೋದಳು ರಾಮಯ್ಯನು ನಿಟ್ಟುಸಿರು ಬಿಟ್ಟು, "ಕಂಡದ್ದಲ್ಲ, ಕೇಳಿದ್ದಲ್ಲ, ಈಚೆಗೆ ಏನೇನೋ ಆಗುತ್ತ ಇದೆ. ನಾನೊಬ್ಬ ನಿರ್ಭಾಗ್ಯ ಮುರಾದ" ಎಂದುಕೊಂಡನು.

* * * * *

ನವರಾತ್ರಿಯ ಉತ್ಸವ; ಮೈಸೂರಿನಲ್ಲಿ ಎಲ್ಲಿ ನೋಡಿದರೂ ಜನ ಸಂದಣಿಯೇ! ಎಲ್ಲಿ ನೋಡಿದರೂ ಆನಂದದ ಕೋಲಾಹಲವೇ! ಒಂದು ಬೀದಿಯಲ್ಲಿ ಯುವತಿಯೊಬ್ಬಳು, ಸ್ವಲ್ಪ ದೂರದಲ್ಲಿ ಹೋಗುತ್ತಿದ್ದಾಕೆಯೊಬ್ಬಳನ್ನು ಕೂಗಿ, "ಅತ್ತೆ, ಅತ್ತೆ! ಸ್ವಸ್ಥವಾಗಿದ್ದೀರಾ?" ಎಂದು ಕೇಳಿದಳು ಹಾಗೆ ಕೂಗಿದವಳು ನಮ್ಮ ಕಮಲಮ್ಮನೇ ಅದುವರೆಗೆ ರಾಮಯ್ಯನು ಸಾಲವನ್ನೆಲ್ಲ ತೀರಿಸಿದ್ದನು, ನವರಾತ್ರಿಯ ಉತ್ಸವವನ್ನು ನೋಡಲು ದಂಪತಿಗಳಿಬ್ಬರೂ ಮೈಸೂರಿಗೆ ಬಂದಿದ್ದರು ಕಮಲಮ್ಮನು ಮಾತನಾಡಿಸಿದುದು ರಂಗಮ್ಮನವರನ್ನು ಆಕೆಯನ್ನು ಊರಿನವರೆಲ್ಲರೂ ಪ್ರೀತಿಯಿಂದ "ಅತ್ತೆ, ಅತ್ತೆ," ಎಂದು ಕರೆಯುತ್ತಿದ್ದರು ಆಕೆಯ ಸೌಜನ್ಯತೆಯೇ ಅದಕ್ಕೆ ಕಾರಣ ರಂಗಮ್ಮನವರ ಮಗನಿಗೆ ಮೈಸೂರಿನಲ್ಲಿ ಕೆಲಸವಾಗಿದ್ದುದರಿಂದ, ಅವರ ಮನೆಯವರೆಲ್ಲರೂ ಕಾಶಿಯಿಂದ ಬಂದ ಸ್ವಲ್ಪ ದಿನಗಳಿಗೆ ಮೈಸೂರಿಗೆ ಹೊರಟುಹೋದರು ರಂಗಮ್ಮನವರು ಕಮಲಮ್ಮನನ್ನು ನೋಡಿ ಐದಾರು ವರುಷಗಳಾಗಿದ್ದುವು ಆಕೆಗೆ ಕಮಲಮ್ಮನ ಗುರುತು ಸಿಕ್ಕುವುದೇ ಕಷ್ಟವಾಯಿತು ಕೊನೆಗೆ ಕಮಲಮ್ಮನೇ ಪರಿಚಯ ಹೇಳಿಕೊಂಡಳು

ರಂಗಮ್ಮ —"ನಮ್ಮೂರು ಕಮಲಮ್ಮನೇ? ಹೌದು! ಹೌದು! ನನಗೂ ಹಾಗೆಯೇ ತೋರಿತು ಇಲ್ಲಿಗೆ ಬಂದವಳು ನಮ್ಮ ಮನೆಯಲ್ಲಿಯೇ ಇಳಿಯಬೇಡವೇ? ಹೀಗೆ ದೂರಮಾಡಿ ಬಿಟ್ಟರೆ ಹೇಗಮ್ಮಾ? ನಿನ್ನ ಗಂಡನೂ ಬಂದಿದ್ದಾರೆಯೋ?

ಕಮಲಮ್ಮ —"ಬಂದಿದ್ದಾರೆ, ಅಗೋ, ಅಲ್ಲಿ ಮರದ ಕೆಳಗೆ ನಿಂತಿದ್ದಾರೆ. ನಿಮ್ಮನ್ನು ಕಂಡು ನಾನು ಓಡಿಬಂದೆ ನಿಮ್ಮ ಮನೆ ನಮಗೆ ಸಿಕ್ಕಲಿಲ್ಲ ಇಷ್ಟು ಅಂತಃಕರಣವಾಗಿ ಕರೆಯೋರು ತಾನೆ ಯಾರು? ಅದರಲ್ಲೂ ಬಡವರನ್ನು ನಾವು ಈಗ ಬೇರೆ ಊರಲ್ಲಿದ್ದೇವೆ, ವರ್ಗವಾಯಿತು"

ರಂಗಮ್ಮ —"ನಾನು ಮನೆ ತೋರಿಸುತ್ತೇನೆ, ನಮ್ಮಲ್ಲೇ ಇದ್ದು ಹೋಗಬೇಕು ಅದಿರಲಿ, ಇದೇಕೆ ತಾಯಿ ಇಷ್ಟು ಬಡವಾಗಿದ್ದೀಯೇ?

ನಿನ್ನ ಗಂಡನೂ ಒಣಗಿ ಹೋಗಿದ್ದಾರೆ ಏಕೆ ನನ್ನಮ್ಮ, ಹೀಗೆ ಕಂಗೆಟ್ಟು ಹೋಗಿದ್ದೀಯೆ? ನಿನ್ನ ಗುರುತೇ ಸಿಕ್ಕುವಹಾಗಿಲ್ಲವಲ್ಲೇ ತಾಯಿ!"

ಕಮಲಮ್ಮ—(ಸ್ವಲ್ಪ ನಗುತ್ತ) "ನಿಮ್ಮ ವಿಶ್ವಾಸ ಯಾವಾಗಲೂ ಒಂದೇ ನಿಮ್ಮಲ್ಲಿ ಇನ್ನು ಹೇಳಬಹುದು: ನಿಮ್ಮ ಬೆಂಡೋಲೆಯಿಂದ ಹೀಗಾದೆವು"

ರಂಗಮ್ಮ—"ಹಾಗಂದರೇನಮ್ಮ?"

ಕಮಲಮ್ಮ—"ನೀವು ಕಾಶಿಗೆ ಹೋಗುವಾಗ ನಿಮ್ಮ ಮನೆಯಿಂದ ಬೆಂಡೋಲೆ ತೆಗೆದುಕೊಂಡು ಹೋಗಿದ್ವೆ, ನಿಮಗೆ ಮರೆತುಹೋಗಿರ ಬೇಕು"

ರಂಗಮ್ಮ—"ಇಲ್ಲ, ಜ್ಞಾನಕವಿದೆ ನೀನು ಅದನ್ನು ಮತ್ತೆ ತಂದು ಕೊಟ್ಟೆಯಲ್ಲೇ ತಾಯಿ!"

ಕಮಲಮ್ಮ—"ಹಾಗಾದರೆ, ನಾನು ತಂದುಕೊಟ್ಟ ವಜ್ರದ ಬೆಂಡೋಲೆಗೂ ನಿಮ್ಮದಕ್ಕೂ ನಿಮಗೆ ವ್ಯತ್ಯಾಸ ತಿಳಿದಿಲ್ಲ ನಾನು ತಂದು ಕೊಟ್ಟದ್ದೂ ಸೊಗನಾದ ಬೆಂಡೋಲೆಯೇ, ಎಷ್ಟೋ ಸ್ವಲ್ಪ ರೂಪಾಯಿ ಮಾತ್ರ ಕಡಿಮೆ ಈಗಲೂ ಆ ಹಣವನ್ನು ಕೊಟ್ಟು ಬಿಡಬೇಕೆಂದಿದ್ದೇವೆ ಆಗಲೇ ಇದನ್ನು ಹೇಳಿಬಿಟ್ಟು ಹಣ ಕೊಡೋಕೆ ಶಕ್ತಿಯಿರಲಿಲ್ಲ"

ರಂಗಮ್ಮ—(ಆಶ್ಚರ್ಯದಿಂದ) "ಏನು! ವಜ್ರದ ಬೆಂಡೋಲೆಯೆ ನೀನು ತಂದುಕೊಟ್ಟದ್ದು!"

ಕಮಲಮ್ಮ—"ಹೌದು, ಹೌದು, ಅತ್ತೆ! ನಾನು ನಿಮ್ಮೊಡನೆ ಸುಳ್ಳು ಹೇಳಿಯೇನೆ? ನೀವು ಕೊಟ್ಟಿದ್ದ ಬೆಂಡೋಲೆ ನಾನು ಕಳೆದೆ ಆಮೇಲೆ ಸಾವಿರದ ನಾನ್ನೂರು ಚಿಲ್ಲರೆಗೆ ಬೆಂಡೋಲೆ ಕೊಂಡು ತಂದುಕೊಟ್ಟೆವು ನಾವು ಬಡವರು ಆ ಸಾಲದ ಹೊಡೆತ ತಡೆದು ಕೊಂಡು ನಾವು ಹೀಗಿರ್ತೇವೆಂತಲೇ ಇರಲಿಲ್ಲ ಏನೋ ದೇವರು

ವಾರುಮಾಡಿದ ನಾವೇನೋ ನಿಮಗೆ ಇನ್ನೂರು ರೂಪಾಯಿಗಿಂತ ಸ್ವಲ್ಪ ಹೆಚ್ಚಾಗಿ ಕೊಡಬೇಕು ಅದೂ ಸ್ವಲ್ಪಸ್ವಲ್ಪವಾಗಿ ಕೊಟ್ಟು ಬಿಡಬೇಕೆಂದಿದ್ದೇವೆ ಅತ್ತೆ! ಬಹಳ ಕಷ್ಟವಾಯಿತು ನೋಡಿ! ಈಗ ನಾವೆಷ್ಟೋ ವಾಸಿ, ಎಲುಬಿನ ಗೂಡಾಗಿ ಹೋಗಿದ್ದು, ಈಗ ಸರಿಹೋಗ್ತಾ ಇದ್ದೇವೆ ಸಾಕು, ಸಾಕು, ಒಡವೆಯ ಆಸೆ! ನಾವು ಪಟ್ಟ ಕಷ್ಟ ನಮ್ಮ ಶತ್ರುಗಳಿಗೂ ಬೇಡ ''

ರಂಗಮ್ಮ —'' ಹಾಗಾದರೆ, ನೀವು ಅದಕ್ಕೆ ಬೆಲೆ ಹೇಗೆ ಕಟ್ಟಿದಿರಿ? ಸಾವಿರದ ನಾನ್ನೂರು ಚಿಲ್ಲರೆ ಕೊಟ್ಟದ್ದು ಹೇಗೆ? ''

ಕಮಲಮ್ಮ —'' ಅದರ ಪೆಟ್ಟಿಗೆ ಒಳಗೇ ಅದರ ಬೆಲೆ ಬರೆದಿತ್ತು ಆದರೆ, ನಮಗೆ ಅಷ್ಟು ಹಣ ಹುಟ್ಟದೆ ಹೋಯಿತು, ಹುಟ್ಟಿದಷ್ಟೇ ಕೊಟ್ಟು ಈ ನಗವನ್ನು ಕೊಂಡೆವು

ರಂಗಮ್ಮನವರು ಕಮಲಮ್ಮನ ಎರಡು ಕೈಗಳನ್ನೂ ಆದರದಿಂದ ಹಿಡಿದುಕೊಂಡು, '' ಅಯ್ಯೋ ನನ್ನ ಕಂದ! ಎಷ್ಟು ಕಷ್ಟಪಟ್ಟೆಯೇ ತಾಯಿ! ನನಗೇನು ಹೊತ್ತು ಬಂತು ಹೇಳು! ನಾನು ಹೇಳಬೇಕಾಗಿತ್ತು, ಆಗಲೇ ಹೇಳಬೇಕಾಗಿತ್ತು ನಮ್ಮ ಮನೆಗೆ ಎಲ್ಲರೂ ಬಂದು ಆಗಾಗ ಒಡವೆ ಕೇಳೋದು ನನಗೂ ಆಸೆಯಾಯ್ತು ಜರ್ಮನಿ ಇಮಿಟೇಷನ್ ವಜ್ರ ತರಿಸಿ ಚಿನ್ನದ ಓಲೆಗೆ ಅವನ್ನು ಕುಂದಣದಲ್ಲ ಕಟ್ಟಿಸಿದ್ದೆ ಆ ಬೆಂಡೋಲೇನೇ ನೀನು ತೆಗೆದುಕೊಂಡುಹೋದದ್ದು ಅದಕ್ಕೆ ನಲವತ್ತೇ ರೂಪಾಯಿ ಬೆಲೆ ಆದರೂ, ಅದು ಅಷ್ಟು ನೊಗನಾಗಿದೆ ನನ್ನ ಕಿವಿಯಲ್ಲಿದೆ ಯಲ್ಲಾ ಈ ವಜ್ರದ ಬೆಂಡೋಲೆ—ಇದರದು ಆ ಪೆಟ್ಟಿಗೆ ಇದಕ್ಕೆ ನಾವಿರದ ಆರನೂರೈವತ್ತು ರೂಪಾಯಿ ಅಯ್ಯೋ ನನ್ನ ಕಂದ! ನಾನು ಮಾಡಿದ ಕೆಲಸ ನಿನಗೆ ಮೂಲವಾಯಿತಲ್ಲೇ ತಾಯಿ!'' ಎಂದು ಹೇಳಿ, ಕಣ್ಣೀರು ಸುರಿಸುತ್ತ, ಆದರದಿಂದ ಕಮಲಮ್ಮನ ತಲೆಯನ್ನು ಸವರಿದರು. ಕಮಲಮ್ಮನು ನೀರವವಾದಳು, ಆಗ ಅವಳು ಮಾತನಾಡುವ ಸ್ಥಿತಿಯಲ್ಲೇ ಇರಲಿಲ್ಲ.

—o—

# ಮಗುವಲ್ಲ, ಮಾರಿ

—o—

ನಮ್ಮ ಊರಿಗೆ ಕೊಂಬಿನ ಕೂಗಿನ ದೂರದಲ್ಲಿ ಒಂದು ಸಣ್ಣ ಹಳ್ಳಿ ಇದೆ ಅಲ್ಲಿ ಕೆಲವು ಮನೆಗಳು ಮಾತ್ರವೇ ಇವೆ ಬೀರಕ್ಕನೆಂಬೊಬ್ಬಳು ಅಲ್ಲಿ ವಾಸವಾಗಿದ್ದಳು ಅವಳಿಗೆ ಯಾರೂ ದಿಕ್ಕಿರಲಿಲ್ಲ ಇದರ ಮೇಲೆ ಬಡತನವೂ ಅವಳನ್ನು ಬೆನ್ನಂಟಿದ್ದಿತು ಕೂಲಿಯ ಕೆಲಸ ಮಾಡಿ ಅವಳು ಜೀವನ ಮಾಡುತ್ತಿದ್ದಳು ಒಂದು ದಿನ ಅವಳು ಕೈಬೆರಳನ್ನು ತಿರುಗಿಸಿ ತಿರುಗಿಸಿ ನೋಡಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ಅವಳು ವಾಸವಾಗಿದ್ದ ಮನೆಯ ಗೌಡಿತಿಯೂ ನೆರೆಹೊರೆಯ ಹೆಂಗಸರೂ ಅಲ್ಲಿ ಗುಂಪು ಸೇರಿದರು ಬೀರಕ್ಕನ ಅಳುವಿಗೆ ಅವರು ಕಾರಣವನ್ನು ಕೇಳಿ ಕೇಳಿ ಸಾಕಾದರು ಯಾರು ಎಷ್ಟು ಕೇಳಿದರೂ ಅವಳು ಕಾರಣವನ್ನು ಹೇಳಲಿಲ್ಲ ಇದರಿಂದ ಅವಳ ಅಳುವು ಮತ್ತಷ್ಟು ಹೆಚ್ಚಾಯಿತು. ಅಲ್ಲಿ ನೇರಿದ್ದವರ ಕುತೂಹಲವು ಕ್ರಮಕ್ರಮವಾಗಿ ಬೇಸರವಾಗಿ ಪರಿಣಮಿಸಿತು ಕೊನೆಗೆ ಅವರೆಲ್ಲರೂ ಹೊರಟುಹೋದರು ಪ್ರೌಢೆಯರಿಬ್ಬರು ಮಾತ್ರ ಕೈ ಬಾಯಿಗಳನ್ನು ತಿರುಗಿಸುತ್ತ, ಬೀರಕ್ಕನು ಈ ರೀತಿ ತಮಗೆ ಅವಮಾನ ಮಾಡುವಳೆಂಬುದು ತಿಳಿದಿದ್ದರೆ ತಾವು ಅಲ್ಲಿಗೆ ಬರುತ್ತಲೇ ಇರಲಿಲ್ಲವೆಂದು ಗೊಣಗಿಕೊಂಡರು ಮುದುಕಿಯೊಬ್ಬಳು ಅದನ್ನು ಕೇಳಿ, ಹೊಸ ಸ್ಥಳದಲ್ಲಿ ಕಟ್ಟಿದಾಗ ಮತ್ತೇನೂ ತನ್ನಿಂದ ಸಾಗದೆ ತಲೆಯನ್ನು ತೂಗಾಡಿಸುವ ಹಸುವಿನಂತೆ, ತಲೆಯನ್ನು ಆಡಿಸಿ, ತನ್ನ ಮನಸ್ಸು ಅದನ್ನೊಪ್ಪದೆಂಬ ಸಂಗತಿಯನ್ನು ಅದರಿಂದ ಸೂಚಿಸಿದಳು ಅಲ್ಲದೆ, ಚಿನ್ನದಂತಹ ಹುಡುಗಿಯಾದ ಬೀರಕ್ಕನು ಅಷ್ಟು ಅಳಬೇಕಾದರೆ ಏನೋ ದೊಡ್ಡ ಕಾರಣವಿರಬೇಕೆಂದೂ, ದುಃಖದ ಆವೇಗದಲ್ಲಿ ಅವಳು ಎಂದಿನಂತೆ ಸವಿಯಾಗಿ ಮಾತನಾಡಲಿಲ್ಲವೇ ಹೊರತು ಅವಮಾನ ಮಾಡಬೇಕೆಂಬುದು ಅವಳ ಉದ್ದೇಶವಲ್ಲವೆಂದೂ ಆ ಮುದುಕಿಯು

ತಿಳಿಸಿದಳು. ಬೀರಕ್ಕನು ತಲೆಯನ್ನು ಕೆದರಿಕೊಂಡು, ಬಂದವರೊಡನೆ ಮಾತಾಡದೆ ಅಳುತ್ತಿದ್ದುದನ್ನು ನೋಡಿದರೆ ಭೂತವು ಹಿಡಿದಿದ್ದರೂ ಹಿಡಿದಿರಬಹುದೆಂದು ಮುದುಕಿಯು ಅನುಮಾನಪಟ್ಟಳು, ಆದರೆ ಆಗಲೇ ಯಾವುದೊಂದು ಸಂಗತಿಯನ್ನೂ ನಿರ್ಧರವಾಗಿ ಹೇಳುವಂತಿಲ್ಲವೆಂದು ಸೂಚಿಸಿದಳು. ಆಕೆಯ ಪ್ರೌಢಿಮೆಯನ್ನೂ ವಿವೇಕವನ್ನೂ ಕಂಡು ಅವಳ ಸಂಗಡಿಗರು ಬೆರಗಾದರೂ ಅವಳು ಹೇಳಿದ ಭೂತದ ಮಾತಿನಲ್ಲಿ ಮಾತ್ರ ಅವರಿಗೆ ನಂಬಿಕೆಯುಂಟಾಗಲಿಲ್ಲ, ತಮ್ಮ ಅಭಿಪ್ರಾಯವನ್ನು ಸೂಚಿಸಿ ಮುದುಕಿಯನ್ನು ರೇಗಿಸುವುದಕ್ಕೂ ಅವರಿಗೆ ಇಷ್ಟವಿರಲಿಲ್ಲ. "ಒಲೆಗೊಂದು ಒದೆಗೊರಡು, ಮನೆಗೊಂದು ಮುದಿಗೊರಡು" ಎಂಬ ಗಾದೆಯು ಸುಮ್ಮನೆ ಹುಟ್ಟಿತೆ ಎಂದು ಹೇಳಿ ಅವರು ಮುದುಕಿಯನ್ನು ಕೊಂಡಾಡಿದರು. ಅದನ್ನು ಕೇಳಿ ಮುದುಕಿಗೆ ಬಹಳ ಸಂತೋಷವಾಯಿತು. ಅವಳು ತನ್ನ ಸಂಕೋಚವನ್ನು ತೋರ್ಪಡಿಸಲೊಲ್ಲದೆ, ತನ್ನ ಬುಗುಡಿಯನ್ನು ಸರಿಮಾಡಿಕೊಳ್ಳುವ ನೆವದಿಂದ, ತಾನು ನಕ್ಕುದು ಅವರಿಗೆ ಕಾಣದಂತೆ ಕೈಯನ್ನು ಮುಖಕ್ಕೆ ಅಡ್ಡವಾಗಿ ಹಿಡಿದುಕೊಂಡು, ಚಿಕ್ಕವರೆದುರಿಗೆ ತನ್ನ ದರ್ಪವನ್ನು ಉಳಿಸಿಕೊಂಡಳು. ಎಲ್ಲರೂ ಅವರವರ ಮನೆಗೆ ಹೊರಟು ಹೋದರು.

ಬೀರಕ್ಕನ ಅಳುವಿಗೆ ಕಾರಣವಿಲ್ಲದೆ ಇರಲಿಲ್ಲ. ಅವಳು ವಾಸವಾಗಿದ್ದ ಊರಿಗೆ ಹದಿನೈದು ಮೈಲಿಗಳ ದೂರದ ಒಂದೂರಿನಲ್ಲಿ ಅವಳ ಮಾವನ ಮನೆಯಿದ್ದಿತು. ಅವನ ಹೆಸರು ಕೆಂಪೇಗೌಡ. ತನ್ನ ಮಗನು ಸತ್ತು ಹೋದಮೇಲೆ ಗೌಡನಿಗೆ ಸೊಸೆಯಲ್ಲಿ ಅನಾದರ ಹುಟ್ಟಿತು. ಗಂಡನು ಸತ್ತುದಕ್ಕಾಗಿ ಯಾವಾಗಲೂ ಗಳಗಳನೆ ಅಳುತ್ತ ಬೀರಕ್ಕನು ಮನೆಬಿಟ್ಟು ಹೊರಗೆ ಹೋಗದೆ ಇರಬೇಕೆಂಬುದು ಅತ್ತೆಯ ಅಪೇಕ್ಷೆ. ಆದರೆ ಸೊಸೆಯು ಹಾಗೆ ಮಾಡದೆ ನೆರೆಹೊರೆಯವರ ಮಕ್ಕಳ ಮೇಲೆ ಪ್ರೀತಿಯನ್ನಿಟ್ಟುಕೊಂಡು ಅವನ್ನು ಮುದ್ದಿಸತೊಡಗಿದಳು. ಇದನ್ನು ನೋಡಿ ಅತ್ತೆಗೆ ರೇಗಿಹೋಯಿತು. ಅತ್ತೆ ಸೊಸೆಯರಿಗಂತು ಹತ್ತಿದ ಜಗಳವು ಹರಿಯುತ್ತಿರಲಿಲ್ಲ. ಆದುದರಿಂದ ಸೊಸೆಯು ಅತ್ತೆಯ ಮನೆಯನ್ನೇ ಬಿಟ್ಟು ಬೇರೆ

ಊರಿನಲ್ಲಿ ಕೂಲಿಯ ಕೆಲಸವನ್ನು ಮಾಡಿಕೊಂಡಿದ್ದಳು ಅವಳಿಗೆ ಇನ್ನೂ ಇಪ್ಪತ್ತೈದು ವರುಷ ವಯಸ್ಸು ಜಾತಿ ಪದ್ಧತಿಯು ಅವಕಾಶಕೊಟ್ಟರೂ ಅವಳು ಮತ್ತೊಬ್ಬನನ್ನು ಮದುವೆಮಾಡಿಕೊಳ್ಳಲು ಇಷ್ಟಪಡಲಿಲ್ಲ

ಬೀರಕ್ಕನಿಗೆ ಮಕ್ಕಳನ್ನು ಕಂಡರೆ ಪಂಚಪ್ರಾಣ ಆದರೆ ದುರ್ದೈವವಶದಿಂದ ಅವಳಿಗೆ ಮಕ್ಕಳಿರಲಿಲ್ಲ ಆದರೂ, ಅವಳು ಖಿನ್ನಮನಸ್ಕಳಾಗದೆ ಸದಾ ಸಂತೋಷದಿಂದಿರುತ್ತಿದ್ದಳು, ಅಲ್ಲದೆ, ಹೆತ್ತವರಿಗೆ ಒಂದು ಮಗುವಾದರೆ, ಊರಿನ ಮಕ್ಕಳೆಲ್ಲ ತನ್ನವೇ ಎಂದು ಹೇಳುತ್ತಿದ್ದಳು ಆದರೆ ಈ ಹೇಳಿಕೆಯು ಅನೇಕರಿಗೆ ಸರಿಬೀಳುತ್ತಿರಲಿಲ್ಲ "ಊರೆಲ್ಲಾ ಇವಳಿಗೆ ಮಕ್ಕಳಂತೆ! ಇವಳ ಹೆಮ್ಮೆಯನ್ನು ಸುಡ ಇವಳೇನು ಕಾಳಿಕಾದೇವಿಯೆ'" ಎಂದು ಮುಂತಾಗಿ ಕೆಲವರು ಅವಳಮೇಲೆ ಹಲ್ಲು ಕಡಿಯುತ್ತಿದ್ದರು, ಅಲ್ಲದೆ, ಏನಾದರೂ ಕಾರಣವು ಸಿಕ್ಕಿದರೆ, ಅವಳನ್ನು ಕಿರುಗುಟ್ಟಿಸಿ ಬುದ್ಧಿಗಲಿಸಬೇಕೆಂದೂ ಅವರು ನಿರೀಕ್ಷಿಸುತ್ತಿದ್ದರು ಸರಳವಾದ ಮನಸ್ಸುಳ್ಳ ಬೀರಕ್ಕನಿಗೆ ಅದೊಂದೂ ತಿಳಿಯದು ಅವಳು ನೆರೆಹೊರೆಯವರ ಮಕ್ಕಳನ್ನೆಲ್ಲ ಒಂದೇಸಮನಾಗಿ ಪ್ರೀತಿಸುವಳು, ಹೇಗಾದರೂ ಮಾಡಿ ಅವಕ್ಕೆ ತಿಂಡಿಯನ್ನು ಹವಣಿಸುವಳು ಅವರ ಜೊತೆಗೆ ತಾನೂ ಹುಡುಗಿಯೆಂಬ ಭಾವನೆಯಿಂದ ಅವರೊಡನೆ ಕಲತು ಆಟವಾಡಿ ಲಲ್ಲೆ ಮಾಡುವಳು ಇದಕ್ಕೆ ಕೆಲವು ಮಂದಿ ಮುದುಕರಿಗೆ ಸರಿಬೀಳುತ್ತಿರಲಿಲ್ಲ ಘನತೆ ಗಾಂಭೀರ್ಯಗಳಿಲ್ಲದ ಬೀರಕ್ಕನಿಂದ ಊರಿನ ಚೇಲೇ ತಪ್ಪಿ ಎಲ್ಲರೂ ಕೆಟ್ಟುಹೋಗುವ ಹಾಗಾಗುವುದೆಂದು ಅವರೆಲ್ಲರೂ ಅಭಿಪ್ರಾಯಪಟ್ಟರು ಬೋನಿನಲ್ಲಿರುವ ಹುಲಿಯು ಬಯಲಿನಲ್ಲಿ ತನ್ನೆದುರಿಗೆ ನಿಂತು ಹುಲ್ಲು ಮೇಯುತ್ತಿರುವ ಕೊಬ್ಬಿದ ಕಡಸಿನಮೇಲೆ ಕೆಡಹುವ ದೃಷ್ಟಿಯನ್ನು ವರ್ಣಿಸಲಾದೀತೆ? ಅಂತಹ ದೃಷ್ಟಿಯನ್ನೇ ಆ ಮುದುಕರೂ ಆಗಾಗ ಬೀರಕ್ಕನಮೇಲೆ ಬೀರುತ್ತಿದ್ದರೂ ನಿರ್ವಾಹವಿಲ್ಲದೆ ಸುಮ್ಮನಿರಬೇಕಾಗಿದ್ದಿತು ಚಿಕ್ಕವಯಸ್ಸಿನ ತಾಯಿಯರಿಗೆ ಮಾತ್ರ, ಬೀರಕ್ಕನು ತಮ್ಮ ಮನೆಗೆ ಬಂದರೆ ಬೆಳದಿಂಗಳು ಬಂದಹಾಗೆ ಪಾಠಶಾಲೆಯ ಬಾಲಕರು ಪಾಠಶಾಲೆಗೆ ರಜವೆಂಬ ಸುದ್ದಿಯನ್ನು ಅಕಸ್ಮಾತ್ತಾಗಿ ಕೇಳಿದಾಗ, ಅವರ ಮನಸ್ಸಿನಲ್ಲಿ

ಉಲ್ಲಾಸವು ಹೇಗೆ ಉಕ್ಕೇರುತ್ತದೆ ನೋಡಿ! ಬೀರಕ್ಕನು ಬಂದರೆ ಚಿಕ್ಕ ವಯಸ್ಸಿನ ತಾಯಿಯರಿಗೂ ಹಾಗಾಗುತ್ತಿದ್ದಿತು ಏಕೆಂದರೆ, ಅವಳು ಅವರ ಮಕ್ಕಳನ್ನು ಮುದ್ದಿಸಿ ಆಟವಾಡಿಸುತ್ತ ಅವರ ಕಷ್ಟವನ್ನು ಕಡಿಮೆಮಾಡುತ್ತಿದ್ದಳು

ಬೀರಕ್ಕನು ಒಮ್ಮೆ ಎಂಟು ಹತ್ತು ತಿಂಗಳುಗಳ ಕಾಲ ಊರನ್ನು ಬಿಟ್ಟು ಎಲ್ಲಿಯೋ ಹೋಗಿದ್ದಳು ಅವಳು ಮತ್ತೆ ಹಿಂತಿರುಗಿ ಬಂದ ಮಾರನೆಯ ದಿನ ಬೆಳಗ್ಗೆ ಅವಳೂ, ಮತ್ತೆ ಕೆಲವರು ಹೆಂಗಸರೂ, ಕೆರೆಗೆ ಹೋಗಿ ನೀರನ್ನು ಹೊತ್ತುಕೊಂಡು ಬರುತ್ತಿದ್ದರು ಆಗ ಒಂದು ಪೊದರಿನ ಬಳಿಯಲ್ಲಿ ಮಗು ಅತ್ತ ಸದ್ದು ಕೇಳಿಸಿತು ಬಿಸಿಲೇರುವ ಹೊತ್ತಿನಲ್ಲಿ ಪಿಶಾಚಿಗಳು ಮಕ್ಕಳ ಹಾಗೆ ಅಳುತ್ತವೆಂದು ಅವರಲ್ಲಿ ಕೆಲವರಿಗೆ ನಂಬಿಕೆಯಿದ್ದಿತು ಜೊತೆಯಲ್ಲಿ ಇತರ ಹೆಂಗಸರಿರುವುದರಿಂದ ಭಯ ಹುಟ್ಟಿವೆ, ತಮ್ಮ ನಂಬಿಕೆಗೆ ನಿದರ್ಶನ ದೊರೆಯಿತೆಂದು ಅವರಿಗೆ ಸಂತೋಷವಾಯಿತು ಬೀರಕ್ಕನು ಮಾತ್ರ ಅವರ ನಂಬಿಕೆಯನ್ನು ಒಪ್ಪಲಿಲ್ಲ ಆದರೆ, ಪೊದರಿನ ಹಿಂದುಗಡೆಗೆ ಅವಳನ್ನು ಕರೆದುಕೊಂಡು ಹೋಗಿ ತಮ್ಮ ಹೇಳಿಕೆಯು ನಿಜವೆಂಬುದನ್ನು ಎದುರಿಗೆ ತೋರಿಸಲು ಅವರಿಗೆ ಸ್ವಲ್ಪ ಭಯ, ಭಯಕ್ಕಿಂತಲೂ ಹೆಚ್ಚಾಗಿ ಬೇಸರ ಏಕೆಂದರೆ, ಅಲ್ಲಿಗೆ ಹೋಗಬೇಕಾದರೆ ಮತ್ತೊಂದು ಹೊಲವನ್ನು ಬಳಸಿಕೊಂಡು ಹೋಗಬೇಕು ಆದರೂ, ಬಡವಳಾದ ಬೀರಕ್ಕನ ಮಾತಿಗೆ ಸೋಲುವುದೆಂದರೆ ತಮಗಲ್ಲದಿದ್ದರೂ ತಮ್ಮ ಕೊರಳಿನಲ್ಲಿದ್ದ ಜೋಡೆಳೆಯ ಚಿನ್ನದ ಗುಂಡಿನ ಸರಕ್ಕೆ ಅವಮಾನವೆಂದು ಕೆಲವರ ಭಾವನೆ ಅಷ್ಟರಲ್ಲಿ ಮಗು ಅಳುವ ಶಬ್ದವು ಮತ್ತಷ್ಟು ಹೆಚ್ಚಿತು ಅದೇನೆಂಬುದನ್ನು ನೋಡಿಯೇ ಬಿಡಬೇಕೆಂದು ಅವರೆಲ್ಲರೂ ನಿರ್ಧರಮಾಡಿಕೊಂಡರು ಆದರೂ, ಅಳುಕೆದೆಯವರು ಮಾತ್ರ ಇದೆಲ್ಲಿಯ ಕಷ್ಟವೆಂದು ಬಗೆದು, ಮಾನಹೋಗುವುದಕ್ಕೆ ಹೆದರಿ, ಕಾಲನ್ನು ಎಳೆದೆಳೆದು ಹಾಕುತ್ತ, ಮನಸ್ಸಿಲ್ಲದೆ ಇದ್ದರೂ, ನಿರ್ವಾಹವಿಲ್ಲದೆ ಮುಂಮುಂದಕ್ಕೆ ಸಾಗುತ್ತಿದ್ದರು ಕೊನೆಗೆ ಅವರೆಲ್ಲರೂ ಹೋಗಿ ನೋಡುವಲ್ಲಿ, ಅಲ್ಲೊಂದು ಮಗು ಅಳುತ್ತ ಮಲಗಿದೆ ಆ ಮಗುವನ್ನು ಸಂತೈಸಲು ತನ್ನ ಜೊತೆಯಲ್ಲಿದ್ದವರು ಯಾರೂ ಮುಂದೆ ಹೋಗದೆ ಇದ್ದು

ದನ್ನು ಕಂಡು, ಬೀರಕ್ಕನು ತನ್ನ ಹರವಿಯನ್ನು ಕೆಳಗಿಟ್ಟು, ಮಗುವನ್ನು ಸಮಾಧಾನಮಾಡತೊಡಗಿದಳು ಇತರರೂ ತಮ್ಮ ತಮ್ಮ ಹರವಿಗಳನ್ನು ಕೆಳಗಿಟ್ಟು ಅಲ್ಲಿಗೆ ಬಂದು ಕುಳಿತರು ಮಗುವು ಎಲ್ಲಿಂದ ಬಂದಿರಬಹುದು? ಯಾರದಿರಬಹುದು? ಅವರು ಅದನ್ನು ಅಲ್ಲಿಗೆ ಏತಕ್ಕೆ ತಂದು ಮಲಗಿಸಿರ ಬೇಕು? ಎಂಬಿವೇ ಮುಂತಾದ ಪ್ರಶ್ನೆಗಳಿಗೆ ಆರಂಭವಾಯಿತು ಅವಕ್ಕೆ ಪುಂಖಾನುಪುಂಖವಾಗಿ ವ್ಯಾಖ್ಯಾನವೂ ಬಳೆಯಿತೆಂಬುದನ್ನು ಹೇಳಬೇಕಾ ದುದೇ ಇಲ್ಲ ಬೀರಕ್ಕನು ಯಾವಾಗಲೂ ಅವಸರ ಪ್ರಕೃತಿಯವಳು. ಇದರ ಮೇಲೆ ಮಕ್ಕಳಲ್ಲಿ ಅವಳಿಗೆ ಬಹಳ ಪ್ರೀತಿ ಮಗುವು ಬೆಳ್ಳಗೆ ಬೊಜ್ಜುಬೊಜ್ಜಾಗಿ ಮೈತುಂಬಿಕೊಂಡು ಲಕ್ಷಣವಾಗಿದ್ದಿತು ಅಲ್ಲದೆ, ಅದಕ್ಕೆ ಪೋಷಕರು ಯಾರೂ ಇರಲಿಲ್ಲ ಉದ್ದೇಶಪೂರ್ವಕವಾಗಿಯೇ ಯಾರೋ ಅದನ್ನು ಅಲ್ಲಿ ತಂದು ಮಲಗಿಸಿ ಹೊರಟುಹೋಗಿದ್ದರು ತನಗೆ ಯಾರಾ ದರೂ ಒಂದು ಮಗುವನ್ನು ಕೊಡುವುದಾದರೆ ತಾನು ಅತ್ಯಂತ ಕೃತಜ್ಞ ಳಾಗಿರುವುದಾಗಿ ಅವಳು ಹಲವು ಬಾರಿ ಯೋಚಿಸಿದ್ದಳು ಅದಕ್ಕೆ ತಕ್ಕ ಹಾಗ ಈಗ ದಿಕ್ಕಿಲ್ಲದ ಮಗುವೊಂದು ಸಿಕ್ಕಿತು ಆಪರ ಅವಳಿಗೆ ದೂರಾ ಲೋಚನೆಯೇ ಇಲ್ಲದೆ ಹೋಯಿತು, ಸಂತೋಷಭರದಲ್ಲ ಅವಳ ಊಹಾ ಪೋಹ ಜ್ಞಾನವೂ ಜಾರಿಹೋಯಿತು ಅವಳ ಮನಸ್ಸು ತನಿಹಣ್ಣನ್ನು ಕಂಡ ಗಿಳಿಯಂತಾಯಿತು ಅವಳು, " ಈ ಮಗು ನನ್ನದು, ನನ್ನದು, ನಾನು ಸಾಕಬೇಕವ್ವ! ಬಂಗಾರದಂಥ ಮಗು, ನನ್ನ ಜೀವದ ಬೊಂಬೆ" ಎಂದು ಮುಂತಾಗಿ ಬಗೆಬಗೆಯಾಗಿ ಬಣ್ಣಿಸಿ ಅದನ್ನು ಮುದ್ದಿನತೊಡಗಿದಳು.

ಹಾಗೆ ಅವಳು ಅವಸರಪಟ್ಟುದು ಅನುಮಾನಕ್ಕೆ ಕಾರಣವಾಯಿತು. ಅವಳು ಕೆಲವು ತಿಂಗಳ ಕಾಲ ಊರಿನಲ್ಲಿರಲಿಲ್ಲ ಮಗುವನ್ನು ಯಾರೂ ಒಲ್ಲದೆ ನಿರಾಕರಿಸಿದ ಮೇಲೆ, ಅದನ್ನು ತಾನು ಸಾಕುವುದಾಗಿ ಅವಳು ಹೇಳಿದ್ದರೆ ಚೆನ್ನಾಗಿದ್ದಿತು ವಿಧಿಯು ನಮಗೆ ಮೋಸಮಾಡುವುದೇ ಇಂತಹ ಸಮಯಗಳಲ್ಲಿ ಅತ್ಯಾಸೆಯು ಬೀರಕ್ಕನ ಹೃದಯವನ್ನು ಹೊಕ್ಕು, ಅವಳ ವಿವೇಕವನ್ನು ಹಾಳುಮಾಡಿತು ಅವಳ ಶುದ್ಧ ಹೃದಯವೇ ಅವಳ ಸರ್ವ ನಾಶಕ್ಕೆ ಕಾರಣವಾಯಿತು. ಎಲ್ಲರಿಗಿಂತ ಮೊದಲು ತಾನೇ ಮುಂದೆ ಹೋಗಿ

ಮಗುವನ್ನು ಸಂತೈಸಿ, ಪ್ರೇಮ ಪಾರವಶ್ಯದಿಂದ ಕೂಡಿದ ಉತ್ಸಾಹಭರದಲ್ಲಿ, ಆ ಮಗುವು ತನ್ನದೆಂದು ಬೇರೆ ಹೇಳಿಕೊಂಡಳು ಅವಳ ಜೊತೆಯಲ್ಲಿದ್ದವರೆಲ್ಲರೂ ಪರಸ್ಪರವಾಗಿ ಒಬ್ಬರ ಮುಖವನ್ನೊಬ್ಬರು ನೋಡಿ ನಕ್ಕರು ಅವರಲ್ಲೊಬ್ಬಳು ತನ್ನ ಬಳಿಯಲ್ಲಿದ್ದವಳ ಕಿವಿಯಲ್ಲಿ, "ಯಾವ ಹುತ್ತದಾಗೆ ಯಾವ ಹಾವೋ ಯಾರು ಬಲ್ಲರಕ್ಕ?" ಎಂದಳು ಅಲ್ಲದೆ, ಆಕೆಯು ಬೀರಕ್ಕನನ್ನು ಕುರಿತು, "ಬೀರಕ್ಕ, ಈ ಮಗು ಯಾರದಿರಬಹುದೆ?" ಎಂದಳು ಬೀರಕ್ಕನು "ಯಾರದಾದರೂ ಆಗತೇಳು, ಯಾರೋ ಬಿಟ್ಟು ಹೋಗವರೆ, ಅವೆಲ್ಲಾ ಈಗ್ಯಾಕೆ? ಚಂದ್ರಾಸ ಸಿಕ್ಕಿದಾಗ ಪುಳಿಂವಪ್ಪ ಏನಾದರೂ ಕೇಳಿದನೇ? ನನಗೆ ಮಕ್ಕಳಿಲ್ಲವ್ವಾ! ಗಂಡು ಮಗು, ಚೆಂದಾಗೈತೆ, ನಾನು ಸಾಕಬೇಕು" ಎಂದಳು ಇದನ್ನು ಕೇಳಿ ಅವರೆಲ್ಲರೂ ಗೊಳ್ಳೆಂದು ನಕ್ಕರು ಸರಳಸ್ವಭಾವದವಳಾದ ಬೀರಕ್ಕನಿಗೆ ಆ ನಗುವಿನ ಅರ್ಥವು ಗೊತ್ತಾಗಲಿಲ್ಲ ಎಲ್ಲರೂ ಸುಮ್ಮನೆ ನಕ್ಕರೆಂದು ತಿಳಿದು ತಾನೂ ನಕ್ಕಳು

*   *   *   *   *

ಮಗುವೇನೋ ದಿನ ದಿನವೂ ಬೆಳೆಯುತ್ತ ಬಂದಿತು ಬೀರಕ್ಕನು ಮಗುವಿಗೆ "ಕೆಂಪ" ಎಂದು ಹೆಸರಿಟ್ಟಳು ಅದು ಅವಳ ಮಾವನ ಹೆಸರೆಂಬ ಅಕ್ಕರೆ ಮಗುವನ್ನು ತನ್ನ ಮನೆಗೆ ಕರೆದು ತಂದ ದಿನದಿಂದ ಬೀರಕ್ಕನು ಇತರ ಮಕ್ಕಳನ್ನು ಲಾಲಿಸುವುದು ಕಡಿಮೆಯಾಯಿತು ಮೊದಲೇ ಕತ್ತಿಯನ್ನು ಮಸೆಯುತ್ತಿದ್ದವರಿಗೆ ಇದಕ್ಕಿಂತ ಹೆಚ್ಚಿನ ಅಪರಾಧವು ಯಾವುದೂ ಇಲ್ಲವೆಂದು ತೋರಿತು ಅವಳ ವಿಷಯವಲ್ಲಿ ಊರಿನಲ್ಲೆಲ್ಲ, "ಗುಸುಗುಸು, ಪಿಸುಪಿಸು" ಹೆಚ್ಚಾಯಿತು ಇಬ್ಬರು ಮೂವರು ಸೇರಿದರೆಂದರೆ, ಅವಳ ಸುದ್ದಿಯೇ ಸುದ್ದಿ ಹೊತ್ತಿಲ್ಲವೆಂದು ಹೇಳುತ್ತ ಸರಸರನೆ ಹೋಗುತ್ತಿದ್ದವರು ಕೂಡ, ಬೀರಕ್ಕನೆಂಬ ಮೂರು ಅಕ್ಷರಗಳಿಂದ ಸೆಳೆಯಲ್ಪಟ್ಟು ಮಾತಿನ ಮಳೆಯನ್ನು ಸುರಿಸುತ್ತ, ಅಭ್ಯಂಗನಕ್ಕಿಳಿದ ಊರ್ಮಿಳೆಯಂತೆ ಒಂದೇ ಸ್ಥಳದಲ್ಲಿ ನಿಂತುಬಿಡುತ್ತಿದ್ದರು ಲಕ್ಷ್ಮಣಸ್ವಾಮಿಯು ವನವಾಸದಿಂದ ಹಿಂದಿರುಗಿ ಬರುವ ವರೆಗೆ ಊರ್ಮಿಳಾದೇವಿಯು ಹದಿನಾಲ್ಕು ವರುಷಗಳ ಕಾಲ ಅಭ್ಯಂಗನದಲ್ಲಿಯೇ ತೊಡಗಿ

ದ್ದುದು ಸುಳ್ಳೋ ನಿಜವೋ ನಮಗೆ ತಿಳಿಯದು (ಅದು ಶ್ರೀಮದ್ರಾಮಾಯಣದಲ್ಲಿ ಹೇಳಿಲ್ಲ) ಆದರೆ, ಅವರು ತಮ್ಮ ಕೆಲಸವನ್ನು ಬಿಟ್ಟು, ಮಾತನಾಡುವ ಪ್ರತಿಮೆಗಳಂತೆ ನೆಲೆಗಟ್ಟಿ ನಿಂತು, ಬೀರಕ್ಕನನ್ನು ದೂಷಿಸುತ್ತ ಇದ್ದುದೇನೋ ನಿಜ ಕೊನೆಕೊನೆಗೆ ಊರಿನವರೆಲ್ಲರೂ ಬೀರಕ್ಕನನ್ನು ಮೂದಲಿಸುವವರೇ ಆದರು ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲೆಂಬುದು ತಿಳಿದೇ ಇದೆ ಕರುಳು ಕತ್ತರಿಸುವ ಹಾಗೆ ಎಲ್ಲರೂ ಯಾವುದೋ ನೆಪವಿಟ್ಟುಕೊಂಡು, ಅವಳ ಬೈಗುಳಕ್ಕೆ ಪ್ರಾರಂಭಿಸಿದರು ಆಗ ಬೀರಕ್ಕನಿಗೆ ಅದರ ಅರ್ಥವು ಚೆನ್ನಾಗಿ ಮುಂಡಪಟ್ಟಾಯಿತು "ಬಿದಿರು ಮೆಳೆ ಧಗಧಗಿಸೆ" ಎಂಬ ವರ್ಣನೆಯ ಹಾಗೆ ಅವಳ ಹೃದಯದಲ್ಲಿ ಉರಿಯೆದ್ದಿತು ಶೋಕದ ಆವೇಗದಿಂದ ಅವಳ ನರಗಳು ಛಟಛಟಿಸಿ ಉರಿದುಹೋಗುವಂತೆ ತೋರಿತು ಜನರು ಅವಳನ್ನು ಕೂಲಿಯ ಕೆಲಸಕ್ಕೆ ಕರೆಯುವುದನ್ನು ಬಿಟ್ಟುಬಿಟ್ಟರು, ಬೀದಿಯಲ್ಲಿ ತಲೆಯಿಟ್ಟರೆ ಬಿರುನುಡಿಗಳ ಸುರಿಮಳೆ ಮನೆಯಲ್ಲಿಯೇ ಸ್ವಸ್ಥವಾಗಿರಲು ಹೊಟ್ಟೆಗಿಲ್ಲದ ಕೊರತೆ ಪಾಪ! ಆ ಸ್ಥಿತಿಯಲ್ಲಿ ಅವಳು ಏನನ್ನು ತಾನೆ ಮಾಡಿಯಾಳು?

ಅವಳಿಗಿದ್ದ ಏಕಮಾತ್ರ ಅವಲಂಬನವು ಅಳುವೊಂದೇ. ಎಷ್ಟು ಅತ್ತರೂ ಬೇಡವೆನ್ನುವವರೇ ಇರಲಿಲ್ಲ ಅವಳಿಗೆ ಅತ್ತು ಅತ್ತು ಸಾಕಾಯಿತು ಮಗುವು ಸಿಕ್ಕಿದ ದಿನ, ಅದಕ್ಕೆ ಹೊದ್ದಿಸಿದ್ದ ಬಟ್ಟೆಯ ಕೊನೆಯಲ್ಲಿ ಕಟ್ಟಿದ್ದ ಹತ್ತು ರೂಪಾಯಿಗಳು ಬೀರಕ್ಕನಿಗೆ ದೊರೆತಿದ್ದುವು ಅದನ್ನು ಮುರಿಸಿ ತಿಂದುದಾಯಿತು ಮುಂದೆ ಅವಳಿಗೆ ದಿಕ್ಕೇ ತೋರದೆಹೋಯಿತು "ಬೀದಿಯಲ್ಲಿ ಸಿಕ್ಕಿದ ಹಾಳು ಮಗುವಿನಿಂದಲ್ಲವೇ ಇಷ್ಟು ಬಾಧೆ! ಅದನ್ನು ಮೊದಲಿದ್ದ ಕಡೆಯೇ ಮಲಗಿಸಿ ಬಂದುಬಿಡಲೆ? ಇದೆಲ್ಲಿಯ ಪ್ರಾರಬ್ಧ?"— ಎಂದು ಮುಂತಾಗಿ ಬೀರಕ್ಕನು ಯೋಚನೆ ಮಾಡತೊಡಗಿದಳು, ಆದರೆ, ಮಗುವನ್ನು ಅಗಲಿರಲು ಮನಸ್ಸಿಲ್ಲದೆ ಬಿಕ್ಕಿಬಿಕ್ಕಿ ಅಳುವಳು ಅವಳ ಗಂಡನು ಜೋಗಿಯಾಗಿದ್ದನು ಅವನು ಊದುತ್ತಿದ್ದ "ಶಿಂಗನಾತ", ಅವನು ಪೂಜಿಸುತ್ತಿದ್ದ ಬೆಳ್ಳಿಯ ತ್ರಿಶೂಲ, ಅವನು ಉಪಯೋಗಿಸುತ್ತಿದ್ದ ವಿಭೂತಿಯ ಉಂಡೆ—ಇವು ಮೂರನ್ನೂ ಬೀರಕ್ಕನು ಪ್ರತಿ ದಿನವೂ

ಪೂಜಿಸುತ್ತಿದ್ದಳು; ತನ್ನ ಶೋಕಭರದಲ್ಲಿ, ಅವುಗಳನ್ನೇ ದೃಷ್ಟಿಸಿ ನೋಡಿ, ತನ್ನ ಗಂಡನೇ ಅಲ್ಲಿದ್ದಂತೆ ಭಾವಿಸಿ, "ನೀನು ಕಾಣೆಯಾ ಮಾರಾಯ! ನಾನು ಅಂತವಳೆ? ನಾನು ಕೆಂಡದಂತೆ ಶುದ್ಧವಾಗಿಲ್ಲವಾ?" ಎಂದು ಹೇಳಿಕೊಂಡು ತನ್ನ ಮನಸ್ಸನ್ನು ತಾನೇ ಸಂತೈಸಿಕೊಳ್ಳುವಳು ತಾನು ಕೈಬಿಟ್ಟರೆ ನಿರಪರಾಧಿಯಾಗಿದ್ದ ಆ ಮಗುವು ಅನ್ಯಾಯವಾಗಿ ಸತ್ತುಹೋಗುವುದೆಂದು ಚಿಂತಿಸಿ, ದೈನ್ಯಭಾವದಿಂದ ಕಳವಳಪಡುವಳು ಹೀಗೆ ದುರ್ಭರ ಜೀವನದಿಂದ ಕೆಲವು ದಿವಸಗಳು ಕಳೆದುವು ಊರಿನವರೆಲ್ಲರಿಗೂ ಅವಳ ಮೇಲೆ ಅಸಹ್ಯವೂ, ದ್ವೇಷವೂ ಹೆಚ್ಚಿದುವು ಬಡವರಲ್ಲಿ ತಪ್ಪು ಸಿಕ್ಕಿದರೆ ಸಾಕು, ಅಥವಾ, ಅವರಲ್ಲಿ ತಪ್ಪಿರುವಂತೆ ತೋರಿದರೂ ಸಾಕು, ಹಗಲು ಹೊತ್ತಿನಲ್ಲಿ ಹಗೇವಿಗಿಳಿಯುವುದಕ್ಕೆ ಧೈರ್ಯವಿಲ್ಲದ ಭೀರುಗಳೂ ಹದಿನಾರಾಣೆಯ ವೀರರೇ ಆಗುತ್ತಾರೆ ಬೀರಕ್ಕನು ವಾಸವಾಗಿದ್ದ ಮನೆಯ ಯಜಮಾನನು ತನ್ನ ಮನೆಯಲ್ಲಿ ಅವಳು ಇನ್ನು ಮುಂದೆ ವಾಸವಾಗಿರಕೂಡದೆಂದು ಅವಳಿಗೆ ಹೇಳಿದನು ಬೀರಕ್ಕನ ಮನಸ್ಸಿಗೆ ಆಕಾಶವೇ ಕಳಚಿ ಬಿದ್ದಂತೆ ತೋರಿತು

ಇಂತಹ ಅವಸ್ಥೆಯಲ್ಲಿ ಬೀರಕ್ಕನು ನಮ್ಮ ಮನೆಗೆ ಬಂದಳು ನಿಮ್ಮ ಪಟ್ಟಣಗಳಲ್ಲಿ ಸಾಲು ತಂತಿಗಳಿದ್ದೂ ಸಮಾಚಾರಗಳು ತಿಳಿಯುವುದು ತಡ, ನಮ್ಮ ಹಳ್ಳಿಗಳಲ್ಲಿ ತಂತಿಯೇ ಇಲ್ಲದೆ ಸಮಾಚಾರಗಳು ಕೂಡಲೆ ಹರಡುತ್ತವೆ, ಒಂದು ಊರಿನಲ್ಲಿ ನಡೆದ ಸಂಗತಿಯು ಮಿಂಚಿನ ವೇಗದಲ್ಲಿ ನೆರೆಹೊರೆಯ ಹಳ್ಳಿಗಳಿಗೆಲ್ಲ ತಿಳಿದುಹೋಗುತ್ತದೆ ಇದಲ್ಲದೆ, ಹಳ್ಳಿಯವರಲ್ಲಿ ಸಾಮಾನ್ಯವಾಗಿ ಒಬ್ಬರ ಯೋಗಕ್ಷೇಮದಲ್ಲಿ ಮತ್ತೊಬ್ಬರಿಗೆ ಆಸಕ್ತಿ ಹೆಚ್ಚು ಇದು ಹಾಗಿರಲಿ ನಾನು ಬೀರಕ್ಕನನ್ನು ಕಂಡೊಡನೆಯೇ, ಅವಳನ್ನು ಕುರಿತು, "ಏನು ಬೀರಕ್ಕ! ಹೀಗೆ ರಗಳೆಗೆ ತಂದುಕೊಂಡೆ! ಇಲ್ಲೇತಕ್ಕೆ ಬಂದೆ?" ಎಂದು ಕೇಳಿದೆನು ಅವಳು ಗೋಳಾಡುವುದಕ್ಕೆ ಮೊದಲಿಟ್ಟು, ನನ್ನ ಕಾಲನ್ನು ಹಿಡಿದುಕೊಂಡು, "ನಾಯಿ ಬೊಗಳಿದ್ದನ್ನು ನಂಬಬೇಡಿ ನನ್ನೊಡೆಯ, ನಾನು ನಿಮ್ಮ ಮಗಳು, ಸುಳ್ಳು ಹೇಳಿದರೆ ನಾಲಗೆಯಲ್ಲಿ ಹುಳುಬೀಳಲಿ" ಎಂದಳು ನಮ್ಮ ಹೆಂಗುಸು ತುಲಸಿಯ

ಪೂಜೆಯನ್ನು ಮಾಡುತ್ತಿದ್ದಳು ಅವಳು, "ಇದೇನೆ? ಅವರ ಕಾಲು ಮುಟ್ಟಿ ಮೈಲಿಗೆ ಮಾಡಿಬಿಟ್ಟೆ! ಮಳೆಗಾಲ, ಬಟ್ಟೆಗಳೇ ಒಣಗೋದಿಲ್ಲ! ನೀವೂ ಸರಿಯೆ! ಅವಳು ಮುಟ್ಟಿದರೂ ಸುಮ್ಮನೇಲೇ ಇದ್ದೀರಿ!" ಎಂದಳು ನಾನು ಆಕೆಯ ಮಾತುಗಳನ್ನು ಕಿವಿಯಮೇಲೆಯೇ ಹಾಕಿ ಕೊಳ್ಳಲಿಲ್ಲ ಬೀರಕ್ಕನಿಗೆ ಸಮಾಧಾನ ಹೇಳಿ, ಅವಳಿಂದ ಎಲ್ಲ ಸಂಗತಿ ಗಳನ್ನೂ ತಿಳಿದುಕೊಂಡೆನು ನ್ಯಾಯಾಧಿಪತಿಯು ಪಕ್ಷ ಪ್ರತಿಪಕ್ಷಗಳನ್ನು ಹಿಡಿಯಕೂಡದಂತೆ ನನಗೆ ನ್ಯಾಯಾಧಿಪತಿಯಾಗುವ ಯೋಗವಂತೂ ಬರಲಿಲ್ಲ. (ನನ್ನದು ದರಿದ್ರ ಜಾತಕವೆಂದು ಮೊದಲೇ ಗೊತ್ತಾಗಿದ್ದಿತು) ಈಗಲಾದರೂ ನ್ಯಾಯವನ್ನು ಹಿಡಿದು ನಿಷ್ಕಲ್ಮಷ ಮನಸ್ಸಿನಿಂದ ಇರ ಬೇಕೆಂದು ನಿರ್ಧರಿಸಿ ಹಾಗೆ ಮಾಡಿದೆನು ಆದರೆ, ಬೀರಕ್ಕನು ಬಹು ಕಾಲ ಊರಲ್ಲಿಲ್ಲದೆ ಇದ್ದುದೂ, ಅವಳು ಊರಿಗೆ ಬಂದ ಮಾರನೆಯ ದಿವಸವೇ ಮಗುವು ಸಿಕ್ಕಿದುದೂ ನುಂಗಲಾರದ ತುತ್ತುಗಳಾಗಿದ್ದುವು. ಅವಳು ಅಷ್ಟು ಕಾಲ ಎಲ್ಲಿಗೆ ಹೋಗಿದ್ದಳೆಂಬುವನ್ನು ಕೇಳಿದೆನು ಅವಳನ್ನು ದೂಷಿಸಿದವರಲ್ಲಿ ಒಬ್ಬರೂ ಇದನ್ನು ವಿಚಾರಿಸದೆ ಆ ನಿರ್ಭಾಗ್ಯಳನ್ನು ದೂಷಿಸುವುದರಲ್ಲಿ ಎಲ್ಲರೂ ಹುರಿಯಾದರು ಬೀರಕ್ಕನಿಗೆ ಮಕ್ಕಳನ್ನು ಮುದ್ದಿಸುವ ಚಪಲವೆಂಬುದನ್ನು ಮೊದಲೇ ಹೇಳಿದ್ದೇನಷ್ಟೆ! ಅವಳು ಯಾರಿಗೂ ತಿಳಿಸದೆ ಒಂದು ದಿನ ರಾತ್ರಿ ನಡಿಹೊತ್ತಿನಲ್ಲಿ, ಪ್ರಜ್ಞೆತಪ್ಪಿದವ ಳಂತೆ, ಊರನ್ನು ಬಿಟ್ಟು ಹೋದುದಕ್ಕೂ ಅದೇ ಕಾರಣವೆಂದು ತಿಳಿಯಿತು ಆ ದಿನ ರಾತ್ರಿ ಅವಳು ತನ್ನ ನಾದಿನಿಯ ಮಗುವು ರೋಗದಿಂದ ನರಳು ತ್ತಿರುವಂತೆ ಸ್ವಪ್ನವನ್ನು ಕಂಡಳಂತೆ ಅತ್ತೆಯ ಮನೆಯಲ್ಲಿದ್ದಾಗ ಅವಳು ಅದನ್ನು ಆಡಿಸುತ್ತಿದ್ದಳಂತೆ ಅದು ಹಿಂದಿನ ಮಾತು ಸ್ವಪ್ನವು ನಿಜವಾ ಗಿರಬಹುದೆಂದು ಚಿಂತಿಸಿ, ಆ ಮಗುವನ್ನು ನೋಡಬೇಕೆಂಬ ಆಸೆಯಿಂದಲೂ, ತನ್ನ ಮತ್ತೊಬ್ಬ ನಾದಿನಿಯ ಮಕ್ಕಳನ್ನು ಆಡಿಸಬೇಕೆಂಬ ತವಕದಿಂದಲೂ ಅವಳು ಒಡನೆಯೇ ಆ ಊರಿಗೆ ಹೊರಟಳು ಇಬ್ಬರು ನಾದಿನಿಯರ ಮನೆ ಗಳೂ ಬೀರಕ್ಕನ ಅತ್ತೆಯ ಊರಿನಲ್ಲಿಯೇ ಇದ್ದುವು ಬೀರಕ್ಕನು ಯಾವ ಕಾರಣದಿಂದ ಎಂತಹ ಸಂದರ್ಭದಲ್ಲಿ ಮನೆಯನ್ನು ಬಿಟ್ಟು ಹೊರಟಳೆಂಬು

ದನ್ನು ಕೇಳಿ ಅವರೆಲ್ಲರೂ ಸಂತೋಷಪಟ್ಟರು ಅಲ್ಲದೆ, ಬಹುಕಾಲದ ಮೇಲೆ ಪ್ರೀತಿಯಿಂದ ಬಂದ ಸೊಸೆಯನ್ನು ಕಂಡು, ಅತ್ತೆಮಾವಂದಿರು ಅವಳನ್ನು ಬಹಳ ಮಮತೆಯಿಂದ ಉಪಚರಿಸಿದರು ಸ್ವಲ್ಪಕಾಲ ಕಳೆದ ಮೇಲೆ ಅತ್ತೆ ಸೊಸೆಯರಿಗೆ ಮತ್ತೆ ಜಗಳವು ಪ್ರಾರಂಭವಾಯಿತು ಸೊಸೆಯನ್ನು ಹೊರಡಿಸಬೇಕೆಂದು ಗೌಡಿತಿಯು ಗೌಡನಿಗೆ ಹೇಳಿದಳು ಆದರೆ ಅವನು ಅದಕ್ಕೆ ಒಡನೆಯೇ ಸಮ್ಮತಿಸಲಿಲ್ಲ ಬೀರಕ್ಕನು ಒಳ್ಳೆಯ ಕೆಲಸಗಾತಿ ಅವಳು ಬಂದಮೇಲೆ ತೋಟದಿಂದ ತುಂಬ ಆದಾಯವು ಬರುವಂತಾಗಿದ್ದಿತು ಕೆಂಪೇಗೌಡನು ತನ್ನ ಮಾತನ್ನು ಕೇಳದೆ ಹೋದುದನ್ನು ಕಂಡು ಗೌಡಿತಿಯು ಕ್ರಮಕ್ರಮವಾಗಿ ಅಸ್ತ್ರಪ್ರಯೋಗಮಾಡಿ ಗೌಡನ ಮನಸ್ಸನ್ನು ಕೆಡಿಸಲಾರಂಭಿಸಿದಳು ಮುದುಕನು ಕಿವಿಯನ್ನು ಜೋಲು ಬಿಡುತ್ತ ಬಂದನು ಒಂದು ದಿನ ಹಿಟ್ಟಿನ ಮುದ್ದೆಯಲ್ಲಿ ಗಂಧಕದ ತುಂಡುಗಳು ಸಿಕ್ಕಿದುವು ಅದೂ ಮಾವನ ತಳಿಗೆಯಲ್ಲಿ ಮಾತ್ರ ಗೌಡಿತಿಯು ಕೈ ಬಾಯಿಗಳನ್ನು ತಿರುಗಿಸುತ್ತ, ಮಾವನನ್ನು ಕೊಂದು ಆಸ್ತಿಯನ್ನು ಪಡೆಯಬೇಕೆಂದು ಮಾಯಾಂಗನೆಯಾದ ಸೊಸೆಯು ಹಾಗೆ ಮಾಡಿರಬೇಕೆಂದು ಕೂಗಾಡಿದಳು ಮುದುಕನೂ ಅದನ್ನು ನಂಬಿದನು ಗಂಧಕವು ಅಲ್ಲಿಗೆ ಹೇಗೆ ಬಂದಿತೆಂಬುದೇ ಬೀರಕ್ಕನಿಗ ತಿಳಿಯದು ಆದರೂ ಅವಳಿಗೆ ಕೂಡಲೆ ಉಚ್ಚಾಟನೆಯಾಯಿತು ಬೀರಕ್ಕನು ನಾದಿನಿಯರ ಮಕ್ಕಳನ್ನು ಬಿಡಲಾರದೆ ಬಿಟ್ಟುಬಂದಳು ಅವಳು ಊರಿಗೆ ಹಿಂದಿರುಗಿದ ಮಾರನೆಯ ದಿನವೇ ಹಿಂದೆ ಹೇಳಿದ ಮಗುವು ದೊರೆತು ಅದರ ದೆಸೆಯಿಂದ ಅಷ್ಟು ಹಗರಣವು ನಡೆದದ್ದು!

ನಾನು ಕಲ್ಲುಬಂಡೆಯಂತೆ ಕುಳಿತು ಎಲ್ಲ ಸಂಗತಿಗಳನ್ನೂ ಕೇಳಿದೆನು. 'ಯಾರೋ ಮಗುವನ್ನು ಬಿಟ್ಟುಹೋದರೆ, ಬೀರಕ್ಕನಿಗೆ ಬ್ರಹ್ಮೇತಿಯು ಬಂದಿತಲ್ಲಾ' ಎಂದುಕೊಂಡೆನು ಮಗುವನ್ನು ಅವರು ಬಿಟ್ಟುಹೋದುದಕ್ಕೆ ಕಾರಣವನ್ನು ಊಹಿಸುವುದೂ ನನಗೆ ಕಷ್ಟವಾಗಲಿಲ್ಲ ಕೊನೆಗೆ ನಾನು ಅವಳನ್ನು ಕುರಿತು, "ನೀನು ಇಲ್ಲಿಗೇಕೆ ಬಂದೆ?" ಎಂದು ಕೇಳಿದೆನು ಬೀರಕ್ಕನು, "ಬರದೇ ಇನ್ನೇನು ಮಾಡಲಿ ಬುದ್ಧೀ? ತಮ್ಮ ಗುಣವನ್ನು

ಕಂಡು ಬಂದೆ ಭೂಮಿತಾಯಿ ದಬ್ಬಿದರೆ ಭೂಮಿಯಮೇಲೆ ಬೀಳಬೇಕು ನನ್ನೊಡೆಯಾ! ತಾವು ಸಿಟ್ಟುಮಾಡಿಕೊಂಡರೂ ತಾವೇ ನನಗೆ ಗತಿ, ನನಗೆ ದಿಕ್ಕಿಲ್ಲ, ನನ್ನ ಕಣ್ಣಾಣೆಗೂ ಸುಳ್ಳು ಹೇಳಾಕಿಲ್ಲ, ನನ್ನ ಬಾಳೇನೋ ನಂಬಿಕೆ ಬರೋಹಂಗಿಲ್ಲ. ನಾನು ಸುಳ್ಳು ಹೇಳಿದರೆ ಸ್ವಾಮಿಯೇ ನೋಡಿಕೊಳ್ಳಲಿ ಮನುಷ್ಯರಿಗಾದರ ಮುಚ್ಚು ಮರೆ, ದೇವರ ಹತ್ತಿರ ಅದು ನಡೆದಾತಾ? ನನಗೆ ದಿಕ್ಕೇ ಇಲ್ಲಿ, ಎಲ್ಲರೂ ನನ್ನ ಬಯ್ಯೋರೇ ಆಗವರೆ, ಊಟಮಾಡಿ ಒಂದೂವರೆ ದಿನ ಆಯಿತು, ಇವತ್ತು ಮನೇ ಬಿಡಬೇಕು, ನೀವೇ ನನ್ನ ದೇವರು ನನ್ನ ಗಂಡ ಇದ್ದಿದ್ದರೆ ನಾನು ಯಾರಲ್ಲೂ ಭಿಕ್ಷಕ್ಕೆ ಬೊಗಸೆ ಒಡ್ಡಬೇಕಾದ್ದೇ ಇರಲಿಲ್ಲ" ಎಂದು ಹೇಳಿ, ಮಕ್ಕಳಹಾಗೆ ಬಿಕ್ಕಿ ಬಿಕ್ಕಿ ಅಳತೊಡಗಿದಳು ನನ್ನದೇನೊ ಕಠಿನ ಮನಸ್ಸು ಅವಳ ಕಥೆಯಿಂದ ನನ್ನ ಮನಸ್ಸೂ ಕರಗಿಹೋಯಿತು ನಾನು, "ನಿನ್ನನ್ನು ನಂಬುತ್ತೇನೆ ಯಾರು ಎಲ್ಲಾದರೂ ಹಾಳಾಗಲಿ ನಿನ್ನ ಭಾಗದ ದೇವರು ನಿನ್ನನ್ನು ಕಾಪಾಡುತ್ತಾನೆ, ಧರ್ಮ ದೇವತೆಯು ನಿನ್ನನ್ನು ರಕ್ಷಿಸುತ್ತಾಳೆ" ಎಂದೆನು ನನ್ನ ಕೊನೆಯ ಮಾತುಗಳು ಅವಳ ಕಿವಿಗೆ ಬೀಳಲೇ ಇಲ್ಲ ಅವಳ ಕಣ್ಣುಗಳು ಅರಳಿಹೋದುವೆಂದರೂ ಅದು ಅತಿಶಯೋಕ್ತಿಯಲ್ಲ ಅವಳು ಬೆಚ್ಚಿಬಿದ್ದು, ಹುಚ್ಚಿಯಂತೆ ಬಳಬಳನೆ ಕಣ್ಣೀರನ್ನು ಸುರಿಸುತ್ತ, "ನನ್ನ ನಂಬುತ್ತೀಯಾ ನಮ್ಮಪ್ಪ! ನಂಬುತ್ತೀಯಾ? ನಾನು ಬದುಕಿದೆ, ಇವತ್ತೇ ಜೀವ ಹೋದರೂ ಚಿಂತೆಯಿಲ್ಲ" ಎಂದು ಮತ್ತೂ ಹೆಚ್ಚಾಗಿ ಅತ್ತುಬಿಟ್ಟಳು ನನಗೂ ನಮ್ಮ ಮನೆಯವಳಿಗೂ ಇಬ್ಬರಿಗೂ ಕಣ್ಣಿನಲ್ಲಿ ನೀರು ಬಂದಿತು ನಾನು ಸ್ವಲ್ಪಹೊತ್ತು ಚೇತರಿಸಿಕೊಂಡು, "ನಾವು ಎಷ್ಟೋ ಪಾಪವನ್ನು ಮಾಡುತ್ತೇವೆ, ಆದರೂ ನಮ್ಮ ಸಮಾನರಿಲ್ಲವೆಂದಿರುತ್ತೇವೆ ಇತರರಲ್ಲಿ ಎಳ್ಳಿನಷ್ಟು ತಪ್ಪು ಸಿಕ್ಕಿದರೂ ಅದನ್ನೇ ಕಾಡುಕಿಚ್ಚಿನಂತೆ ದೊಡ್ಡದಾಗಿ ಹೊತ್ತಿಸಿ ಅವರನ್ನು ಬೇಯಿಸುತ್ತೇವೆ ಇತರರಲ್ಲಿ ತಪ್ಪೇ ಇಲ್ಲದಿರುವಾಗಲೂ ನಾವು ದುಡುಕಿ ಅವರನ್ನು ತಪ್ಪಿತಸ್ಥರೆಂದು ಭಾವಿಸುತ್ತೇವೆ ಏನೋ, ಹಾಳು ಪ್ರಪಂಚ!" ಎಂದೆನು ಬೀರಕ್ಕನ ಮುಖವು ಊರಗಲವಾಯಿತು. ಅವಳು ನನ್ನ ಕಾಲುಗಳೆರಡನ್ನೂ ಹಿಡಿದುಕೊಂಡು ಅಡ್ಡಬಿದ್ದು, "ಇವು

ನನ್ನ ದೇವರ ಪಾದ" ಎಂದಳು. ನನಗೆ ರೇಗಿತು, ಪಾಪಿಯಾದ ಮನುಷ್ಯನನ್ನು ದೇವರೆಂದುದನ್ನು ಕೇಳಿ ನನಗೆ ಮೈ ಉರಿಯಿತು. ನಮಗೆ ದೇವರು ಅಷ್ಟು ಅಗ್ಗವೆ? ಬೀರಕ್ಕನಲ್ಲದೆ ಗಂಡಸರು ಯಾರಾದರೂ ಹಾಗೆ ಹೇಳಿದ್ದರೆ, ಅವರ ಕೆನ್ನೆಗೆ ಬಲವಾಗಿ ಎರಡು ಏಟುಗಳನ್ನು ಕೊಡುತ್ತಿದ್ದೆನು. ನಾನು, "ಇದೇನು ಕೆಲಸ! ಹೀಗೆಲ್ಲ ಮಾಡಬೇಡ, ಮೇಲಕ್ಕೇಳು" ಎಂದು ಗದರಿಸಿದೆನು. ಅಂದು ಅವಳನ್ನು ಏಕೆ ಗದರಿಸಿದೆನೋ ಎಂದು ನಾನು ಈಗಲೂ ಪೇಚಾಡುತ್ತಿದ್ದೇನೆ. ಕೋಪವಲ್ಲ ಕೊಯ್ದು ಹೋಗು ಶಾಂತವಾದಮೇಲೆ ಅಂಟೀತೆ? ಬೀರಕ್ಕನು ತಟಕ್ಕನೆ ಎದ್ದು ಕುಳಿತಳು. ನಾನು ಅವಳ ಮಗುವಿನ ಸುದ್ದಿಯನ್ನು ಕೇಳಿದನು. ಅದನ್ನು ಮನೆಯಲ್ಲಿ ಬಿಟ್ಟು ಬಂದಿರುವುದಾಗಿ ಅವಳು ಹೇಳಿದಳು.

ನಾನು ಆ ಬಳಿಕ, "ಬೀರಕ್ಕಾ! ನನ್ನಿಂದ ಏನಾಗಬೇಕು? ಅಗತ್ಯವಾಗಿ ಮಾಡಿಕೊಡುತ್ತೇನೆ, ಹೇಳಮ್ಮಾ!" ಎಂದೆನು.

ಬೀರಕ್ಕ—"ಬುದ್ಧೀ! ಈ ಸುತ್ತಿನಲ್ಲಿ ಜನರು ನನ್ನನ್ನು ಇರಗೊಡಿಸುವ ಹಾಗಿಲ್ಲ. ಬಹಳ ಅವಮಾನ, ಪ್ರಾಣ ಕಳೆದುಕೊಳ್ಳೋಣ ಅಂತ ಅನ್ನಿಸ್ತದೆ. ಆದರೆ ಜೀವ ಕಳೆದುಕೊಳ್ಳೋದು ಹೆಂಗೆ? ಅಲ್ಲದೆ, ನಾನು ಹೋದರೆ ಮಗುವೋ? ಪಾಪ! ಹಾಲು ಬಂಗಾರ. 'ಕೆಟ್ಟು ಪಟ್ಟಣ ಸೇರು'—ಕಂಡೇ ಅದೆ ಈ ಗಾದೆ. ನಾನು ಬೆಂಗಳೂರಿಗೆ ಹೋಗ್ತೀನಿ, ಸಹಾಯ ಮಾಡಿ ಕಳುಹಿಸಿಕೊಡಿ."

ನಾನು—"ಬೀರಕ್ಕಾ! ಹಾಗೆ ಮಾಡಬೇಡ, ನಮ್ಮ ಮನೆಯಲ್ಲಿಯೇ ಇದ್ದುಬಿಡು, ಇಲ್ಲೇ ಊಟಮಾಡು, ನಾವು ತಿನ್ನುವುದನ್ನು ನೀನೂ ತಿನ್ನು! ಬೆಂಗಳೂರಿಗೆ ಏಕೆ ಹೋಗಬೇಕು? ನೀನು ಅಲ್ಲಿಗೆ ಹೋದ ಮೇಲೆ ಅದಕ್ಕೆ ಅವಕಾಶಕೊಟ್ಟ ನಾವೆಲ್ಲರೂ ಇಲ್ಲಿದ್ದು ಪ್ರಯೋಜನವೇನು? ಏಳು, ಬೇಗ ಊಟಮಾಡಿ ಊರಿಗೆ ಹೋಗಿ ಮಗುವನ್ನು ಕರೆದುಕೊಂಡು ಬಾ."

ಬೀರಕ್ಕ—"ತಣ್ಣಗೆ ಬದುಕು ನಮ್ಮಪ್ಪಾ! ತಣ್ಣಗೆ ಬದುಕು ನಾನು ಇಲ್ಲಿದ್ದು ತಲೆಯೆತ್ತಿಕೊಂಡು ತಿರುಗಲಾರೆ ಪಾಪ ಮಾಡಿದೋರೆಲ್ಲಾ ಜೋರಾಗವರೆ, ನಾನು ಧರ್ಮಾ ಮಾಡಿ ಕರ್ಮಾ ಕಟ್ಟಿಕೊಂಡೆ ಬೆಂಗಳೂರಿಗೆ ಹೋಗಿ ಜೀವನ ಮಾಡಿಕೊತ್ತೀನಿ ಮಗೂನ ಕರೆ ಕೊಂಡು ಬಂದು ಊಟ ಮಾಡ್ತೀನಿ ಅದಿರಲಿ, ಇಲ್ಲಿ ನೋಡಿ ನಾನು ಕೆಟ್ಟವಳಾಗಿದ್ದರೆ ಇದನ್ನು ಮುಡಿಯಲ್ಲಿ ಕಟ್ಟಿಕೊಂಡಿರ ಬೇಕಾಗಿತ್ತಾ?"

ಬೀರಕ್ಕನು ತಲೆಯ ತುರುಬನ್ನು ಬಿಚ್ಚಿ ಒಂದು ಸಣ್ಣ ಬಟ್ಟೆಯ ಗಂಟನ್ನು ಕೆಳಗೆ ಹಾಕಿದಳು ಅದನ್ನು ಬಿಚ್ಚುವುದಕ್ಕೆ ಮೊದಲು ಅದನ್ನೇ ದೃಷ್ಟಿಸಿ ನೋಡಿ ಕಣ್ಣೀರನ್ನು ಸುರಿಸಿದಳು, ಬಳಿಕ ಅವಳು ಅದನ್ನು ಬಿಚ್ಚಲು, ಅದರಲ್ಲಿ ಒಡೆದ ಬಳೆಯ ಉಂಗುರದ ಚೂರುಗಳಿದ್ದುವು ಹಸುರು ಗಾಜಿನ ಬಳೆಯ ಉಂಗುರದ ಚೂರುಗಳು ಬೀರಕ್ಕನು ಆ ಚೂರುಗಳನ್ನು ಕಣ್ಣಿಗೊತ್ತಿಕೊಂಡು ಮುಗಿಲ ಕಡೆಗೆ ಕೈ ಮುಗಿದಳು ಅವಳ ಕಣ್ಣುಗಳಿಂದ ನೀರು ಹರಿಯುತ್ತಿದ್ದಿತು ಅವಳ ಗಂಡನು ನಂಜನಗೂಡು ಜಾತ್ರೆಗೆ ಹೋಗಿದ್ದಾಗ ಅದನ್ನು ತಂದು ಅವಳ ಬೆರಳಿಗಿಟ್ಟು ನಲಿದನಂತೆ ಬೀರಕ್ಕನು ತನ್ನ ಬಡತನಕ್ಕೆ ತಾನೇ ನಕ್ಕು, ಅರ್ಧ ಹಾಸ್ಯದಿಂದ, "ಇದನ್ನು ತಂದುಕೊಟ್ಟಿದ್ದು ನಿನಗೆ ಕೀರ್ತಿ, ನನಗೆ ಭೂಷಣ, ಮಕ್ಕಳಾದರೆ ಅವಕ್ಕೆ ಆಸ್ತಿ" ಎಂದು ಹೇಳಿದಳಂತೆ, ಅವರಿಬ್ಬರೂ ಬಿದ್ದು ಬಿದ್ದು ನಕ್ಕರಂತೆ, ಆ ಉಂಗುರವು ಕಲ್ಲುಕಂಬಕ್ಕೆ ತಗುಲಿ ಒಡೆದುಹೋಯಿತಂತೆ ಅದಕ್ಕಾಗಿಯೇ ಯಾರು ಸಮಾಧಾನ ಹೇಳಿದರೂ ಸುಮ್ಮನಾಗದೆ ಬೀರಕ್ಕನು ಅಳುತ್ತಿದ್ದುದು ಬೀರಕ್ಕನು ಈ ಉಂಗುರದ ಚೂರುಗಳನ್ನು ಪ್ರತಿದಿನವೂ ತೊಳೆದು ಆ ನೀರನ್ನು ತೀರ್ಥದಂತೆ ಕುಡಿಯುತ್ತಿದ್ದುದಾಗಿ ತಿಳಿಸಿದಳು ನಮ್ಮ ಮನೆಯವಳು ಸುಮ್ಮನಿರದೆ "ಅದರ ಚೂರೇನಾದರೂ ಹೊಟ್ಟೆಗೆ ಹೋಗಿ ನೀನು ಸತ್ತುಹೋದರೆ ಏನು ಮಾಡುತ್ತೀಯೇ ಬೀರಕ್ಕ?" ಎಂದು ಹೇಳಿ ನಕ್ಕಳು ಬೀರಕ್ಕನು, "ಅಷ್ಟಾದರೆ ಬದುಕಿದೆ ತಾಯಿ! ಅರ್ಧ ಉರಿದ ಕೊಳ್ಳಿಯಂತಿದೋ ಈ ಘಟ ಬಿದ್ದುಹೋದರೆ ಪೀಡೆಯೇ

ಕಳೆಯಿತು ಅವರು ಕೈಲಿ ಹಾಕಿಕೊಂಡಿದ್ದ ಉಂಗುರದ ದೆಸೆಯಿಂದ ಜೀವ ಹೋದರೆ ಅದೂ ಒಂದು ಪುಣ್ಯ ನಾನು ಇಲ್ಲಿ ಅಳೋದಿನವೆಲ್ಲ ಹೋಗಿ, ಅವರ ಜೊತೇಲಿ ಸ್ವರ್ಗದ ಮನೇಲಿ ನಗೋಕೆ, ನಾನು ಮುಂದೆ ಬದುಕೋ ದಿನಗಳೂ ಕೂಡಿ ಬರ್ತವೆ, ನೋಡಿ'' ಎಂದಳು ನಮ್ಮ ಮನೆಯವಳ ಕಣ್ಣಿನಲ್ಲಿ ನೀರು ಬಂದಿತು ಆಕೆಯು, ''ಏಳು ನನ್ನ ತಾಯಿ, ಏಳು! ಪತಿವ್ರತೆಯೆಂದರೆ ನೀನೇ ಹಿಂದಕ್ಕೆ ಎಲ್ಲರೂ ಸಹಗಮನ ಮಾಡ್ತಾ ಇದ್ದರಂತೆ ದಂಪತಿಗಳನ್ನು ಸುಟ್ಟ ಸ್ಥಳದಲ್ಲಿ ಅವರ ಜ್ಞಾಪಕಕ್ಕಾಗಿ ಮಾಸ್ತಿಕಲ್ಲು ನೆಡೋರಂತೆ ನೀನು ಬಂಕಿಯ ಬೇಗೆಯಲ್ಲ ಬೇಯದೇನೆ ಸಹಗಮನ ಮಾಡಿದವಳು'' ಎಂದು ಹೇಳಿ, ಆದರದಿಂದ ಅವಳನ್ನು ಮೇಲಕ್ಕೆಬ್ಬಿಸಿದಳು ನಾನು ಮುಯ್ಯಿಗೆ ಮುಯ್ಯಿ ತೀರಿಸುವುದಕ್ಕಾಗಿ, ''ಮೈಲಿಗೆಯಾಗಲಿಲ್ಲವೆ? ನಿನ್ನ ಕೆಲಸವೂ ಸರಿಯೆ!'' ಎಂದೆನು ಆಕೆ, ''ಸದ್ಯಕ್ಕೆ ನೀವು ಸುಮ್ಮನಿರಿ, ಬೀರಕ್ಕ ಪತಿವ್ರತೆ, ಅವಳನ್ನು ಮೈಲಿಗೆಯವರು ಮುಟ್ಟಿದರೆ ಮಡಿಯವರಿಗಿಂತ ಪವಿತ್ರರಾಗ್ತಾರೆ'' ಎಂದು ಹೇಳಿ ಮತ್ತೆ ಕಂಬನಿದುಂಬಿದಳು ಆಕೆಯ ಆನಂದಬಾಷ್ಪವನ್ನು ನೋಡಿ ನನಗೂ ಕಣ್ಣಿನಲ್ಲಿ ನೀರು ಬರುವಂತಾಯಿತು

ಬೀರಕ್ಕನು ಊರಿಗೆ ಹೋಗಿ ಸ್ವಲ್ಪ ಹೊತ್ತಿಗೆ ಮಗುವನ್ನು ಕರೆದುಕೊಂಡು ಬಂದಳು, ತರುವಾಯ ಸಾವಕಾಶವಾಗಿ ಊಟಮಾಡಿದಳು ನಮ್ಮ ಮನೆಯವಳು ತುಂಬ ಧರ್ಮಬುದ್ಧಿಯುಳ್ಳವಳು ಶಾನುಭೋಗರ ಮನೆಗೆ ಹೋಗಿ, ನಮ್ಮ ಮನೆಯ ಎಮ್ಮೆಯ ಹಾಲಿಗೆ ಬದಲಾಗಿ ಹಸುವಿನ ಹಾಲನ್ನು ತಂದು, ಇಂಗುವಂತೆ ಅದನ್ನು ಕೆಂಪಗೆ ಕಾಯಿಸಿ ಸ್ವಲ್ಪ ಸಕ್ಕರೆಯನ್ನು ಸೇರಿಸಿ, ಒಂದೆರಡು ತೊಟ್ಟುಗಳಷ್ಟು ತುಪ್ಪವನ್ನೂ ಹಾಕಿ ಮಗುವಿಗಾಗಿ ಅದನ್ನು ಕೊಟ್ಟಳು ಮಗುವು ಆತುರದಿಂದ ಅದನ್ನು ಕುಡಿದು ನವಿಲಿನಂತೆ ಕೇಕೆ ಹಾಕಿತು, ನಗುತ್ತ ಲಲ್ಲೆಮಾಡಿತು ನಮ್ಮವಳು, ''ಯಾರಾದರೂ ಪರಮಾತ್ಮ, ಯಾವ ಜಾತಿಯವರಾದರೇನು? ಯಾವ ಸ್ಥಿತಿಯಲ್ಲಿದ್ದರೇನು? ಮಕ್ಕಳೇ ಚಿನ್ನ!'' ಎಂದಳು ಬೀರಕ್ಕನಿಗೆ ಎಷ್ಟು ಹೇಳಿದರೂ ಅವಳು ನಮ್ಮ ಮನೆಯಲ್ಲಿರಲು ಒಪ್ಪಲಿಲ್ಲ, ಕೊನೆಗೆ, ನಮ್ಮ

ಊರಿನಲ್ಲಿರುವುದಕ್ಕೂ ಕೂಡ ಒಪ್ಪದೆ ಬೆಂಗಳೂರಿಗೆ ಹೊರಟುಹೋದಳು; ನಾನು ರೈಲಿಗೆ ದುಡ್ಡನ್ನು ಕೊಟ್ಟು ಮೇಲೆ ಹತ್ತುರೂಪಾಯಿಗಳನ್ನೂ ಕೊಟ್ಟು ಅವಳನ್ನು ಕಳುಹಿಸಿದೆ ಬಡವರು ನಾವು ಇನ್ನೆಷ್ಟುತಾನೆ ಕೊಡಬಲ್ಲೆವು?

*  *  *  *  *

ಬೆಂಗಳೂರಿನಲ್ಲಿ ಅಂದು ಮಳೆಯ ಹೊಡೆತವೇ ಹೊಡೆತ, ಹನಿಗಳು ನೆಲ್ಲಿಯ ಕಾಯಿಗಳಿಂದ ಹೊಡೆದಹಾಗೆ ರಭಸದಿಂದ ಬೀಳುತ್ತಿದ್ದುವು ಮಿಂಚು ಧಟಕ್ಕನೆ ಕಾಣಿಸಿಕೊಂಡು ಕಣ್ಣುಗಳನ್ನು ಸ್ವಲ್ಪಹೊತ್ತು ಕುರುಡು ಮಾಡುತ್ತಿದ್ದಿತು ಗುಡುಗಿನ ಆರ್ಭಟವಂತು ಹೇಳುವ ಹಾಗಿರಲಿಲ್ಲ. ದೇವೇಂದ್ರನಿಗೆ ಬಹಳ ಕೋಪ ಬಂದಿರುವ ಹಾಗೆ ತೋರುತ್ತಿದ್ದಿತು ಬಹಳ ಹೊತ್ತಿನಮೇಲೆ ಮಳೆ ನಿಂತರೂ ಗುಡುಗು ಮಿಂಚುಗಳ ಆರ್ಭಟ ವೇನೋ ನಿಲ್ಲಲಿಲ್ಲ ಕೆಲವು ಬೀದಿಗಳಲ್ಲಿ ತಂತಿಯ ದೀಪಗಳೆಲ್ಲ ಆರಿಹೋ ಗಿದ್ದುವು, ಅಂಗಡಿಗಳ ದೀಪಗಳ ಬೆಳಕನ್ನೂ ಕಾಣುವಹಾಗಿರಲಿಲ್ಲ. ಅಂದು ಅಮಾವಾಸ್ಯೆಯಾದುದರಿಂದ ಅಂಗಡಿಗಳನ್ನು ಮುಚ್ಚಿದ್ದರು "ಅಕ್ಕಿಯ ಮೇಲೆ ಆಸೆ, ನಂಟರಮೇಲೆ ಇಷ್ಟ" ಎಂಬ ಗಾದೆಯಂತೆ ಕೆಲವು ಮಂದಿ ವರ್ತಕರು ಅಂಗಡಿಗಳನ್ನು ಸುಮ್ಮನೆ ತೆರೆದುಕೊಂಡಿರುವಂತೆ ನಟಿಸುತ್ತ ಕುಳಿತಿದ್ದರು, ಬಂದಷ್ಟೇ ಸಾಕೆಂಬುದು ಅವರ ಆಸೆ, ಅಂಗಡಿಗಳನ್ನು ಮುಚ್ಚಿದ್ದ ಸರಿಯ ವರ್ತಕರಿಗೆ ಗೋಚರವಿಲ್ಲದಂತೆ ವ್ಯಾಪಾರಮಾಡಬೇ ಕೆಂಬುದು ಅವರ ಕುತೂಹಲ ತಂತಿಯ ದೀಪಗಳಿಗೂ ಅವರಮೇಲೆ ಕೋಪಬಂದು ಅವೂ ಆರಿಹೋಗಿದ್ದುವು ಆದುದರಿಂದ, ಆ ಅಂಗಡಿಗ ಳಲ್ಲಿ ಮೂರುಕಾಸಿನ ಬೆಲೆಯ ಬಣ್ಣ ಬಣ್ಣದ ಮೇಣದ ಬತ್ತಿಗಳು ಮಿನುಗು ತ್ತಿದ್ದುವು ವಾಚಕರಿಗೆ ಪೂರ್ವಪರಿಚಿತಳಾದ ಬೀರಕ್ಕನು ಒಂದು ಅಂಗ ಡಿಗೆ ಹೋಗಿ, "ಅಪ್ಪಾ! ಬೆಳಗಿನಿಂದ ಊಟವಿಲ್ಲ, ಒಂದಾಣೆಯನ್ನಾದರೂ ಕೊಡಿರಪ್ಪಾ!" ಎಂದಳು ವರ್ತಕನು ನಕ್ಕು, "ಭೇಷ್! ಕೇಳುವುದ ರಲ್ಲಿಯೂ ಒಂದಾಣೆಯನ್ನೇ ಕೇಳುತ್ತಾಳೆ! ಬೆಳಗಿನಿಂದ ಊಟವಿಲ್ಲವಂತೆ, ಶುದ್ಧ ಸುಳ್ಳು" ಎಂದನು.

ಬೀರಕ್ಕ—"ನಾನು ಹಳ್ಳಿಯ ಹೆಂಗಸಪ್ಪಾ! ಪರಸ್ಥಳ, ಒಂದು ಸುಳ್ಳೂ ಹೇಳಾಕಿಲ್ಲ; ಮಗುವು ಬೇರೆ ಐತೆ. ಜನ್ಮಾಂತರದಲ್ಲಿ ಕೊಟ್ಟು ಹುಟ್ಟಿದ್ದೀರಿ, ದೇವರು ಎರಡು ಕೈಲೂ ಕೊಟ್ಟವನೆ ನಾನು ಬಡವೆ, ಯಾರೂ ದಿಕ್ಕಿಲ್ಲ, ಸಹಾಯಮಾಡಿ"

ವರ್ತಕ—"ಮುಂದಕ್ಕೆ ಹೋಗಿಬಾ, ಈ ಹೊತ್ತು ಅಮಾವಾಸ್ಯೆ"

ಬೀರಕ್ಕ—"ಅಮಾಸೆಯಾದರೇನಪ್ಪಾ? ಊಟಕ್ಕೆ ಅಮಾಸೆಯಿಲ್ಲ, ನೋಟಕ್ಕೆ ಅಮಾಸೆಯಿಲ್ಲ, ಬಡವರಿಗೆ ಧರ್ಮಕೊಡಲು ಅಮಾಸೆಯೆ?"

ವರ್ತಕ.—"ಸಾಕು, ಸಾಕು, ಹೋಗಿ ಬಾ"

ಬೀರಕ್ಕನು ಸಂಕೋಚದಿಂದ ಮುಖವನ್ನು ತಗ್ಗಿಸಿಕೊಂಡು ಮುಂದೆ ಹೊರಟು ಮತ್ತೊಂದು ಅಂಗಡಿಗೆ ಹೋದಳು ಅಲ್ಲಿ ಮೂರುಕಾಸು ಸಿಕ್ಕಿತು ಅವಳು ಬೆಂಗಳೂರಿಗೆ ಹೋಗಿ ಇನ್ನೂ ಒಂದೂವರೆ ತಿಂಗಳಾಗಿರಲಿಲ್ಲ. ಅಷ್ಟರಲ್ಲಿಯೇ ಅವಳು ಬೆಂಕಿಸೋಕಿದ ಬದನೆಯ ಕಾಯಿಯಂತೆ ಆಗಿದ್ದಳು ಕೈತುಂಬ ಯಥೇಷ್ಟವಾಗಿ ಹಣವಿದ್ದವರಿಗೆ ಬೆಂಗಳೂರು ಕಲ್ಯಾಣ ನಗರ ಬೀರಕ್ಕನು ಅಂಗಡಿಯ ಬೀದಿಯಿಂದ ಚಿಕ್ಕಪೇಟೆಯಲ್ಲಿರುವ ಕಾಶೀವಿಶ್ವೇಶ್ವರನ ಗುಡಿಯಬಳಿಗೆ ಹೋಗಿ ಅಲ್ಲಗೆ ಬಂದವರನ್ನು ಕಾಸುಕೊಡೆಂದು ಬೇಡಿದಳು ಅಲ್ಲಿಗೆ ಬಂದ ಒಬ್ಬ ಗೃಹಸ್ಥನು "ಕೂಲೀ ಮಾಡು, ನಿನಗೇನು ಕೇಡು?" ಎಂದನು ಬೀರಕ್ಕನು, "ಕೂಲಿಯ ಕೆಲಸ ಸಿಕ್ಕಿದರೆ ಸಾಕೆಂದು ಅಲೆಯುತ್ತಿದ್ದೀನಿ, ನಾನು ಈ ಊರಿಗೆ ಬರಬಾರದಾಗಿತ್ತು" ಎಂದು ಅತ್ತಳು ಗೃಹಸ್ಥನು ಮೂಗನಂತೆ ದೇವಸ್ಥಾನಕ್ಕೆ ಹೋದನು ಯಾರ ಕಷ್ಟವು ಹೇಗಿರುತ್ತದೋ ಬಲ್ಲವರಾರು? ಸಹಾಯ ಮಾಡಿದರೆ ಸಂತೋಷ ಇಲ್ಲವಾದರೆ ಬಿರುನುಡಿಗಳನ್ನಾದರೂ ಆಡದೆ ಒಳ್ಳೆಯ ಮಾತಿನಲ್ಲಿ ಇಲ್ಲವೆಂದರೆ ಎಷ್ಟೋ ಮೇಲು ಆದರೆ, ಎಷ್ಟುಮಂದಿಗೆ ಆ ತಾಳ್ಮೆಯುಂಟು?

ಬೀರಕ್ಕನು ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿದ್ದಳು. ಆಗ ದೇವಸ್ಥಾನದಿಂದ ಒಬ್ಬ ಸಾಧ್ವಿಯು ಹೊರಗೆ ಬಂದಳು. ಆಕೆ ಅನುಪಮ

ಲಾವಣ್ಯವತಿ ಆದರೆ, ಶೋಕಾಕ್ರಾಂತಳಾಗಿದ್ದಂತೆ ತೋರುತ್ತಿದ್ದಿತು. ಆಕೆಯು ದೇವಸ್ಥಾನದ ಒಳಗಿನಿಂದ ಬಂದು ಮೆಟ್ಟಿಲುಗಳನ್ನು ಇಳಿಯುವ ವೇಳೆಗೆ ಸರಿಯಾಗಿ ತಂತಿಯ ದೀಪಗಳೆಲ್ಲ ಮತ್ತೆ ಹೊತ್ತಿಕೊಂಡುವು ಆಕೆ ಕರಿಯ ರೇಷ್ಮೆಯ ಸೀರೆಯನ್ನುಟ್ಟು, ಬಿಳಿಯ ರೇಷ್ಮೆಯ ಕುಪ್ಪಸವನ್ನು ತೊಟ್ಟಿದ್ದಳು, ಕಿವಿಯಲ್ಲಿ ವಜ್ರದ ಬೆಂಡೋಲೆಯು ಮಿನುಗುತ್ತಿದ್ದಿತು, ಕೊರಳಿನಲ್ಲಿದ್ದ "ಷರಟು" ಅಡ್ಡಿಕೆಯಿಂದ ವಜ್ರದ ಪದಕವು ತೂಗಾಡುತ್ತಿದ್ದಿತು, ಕೈಯಲ್ಲಿ ಚಿನ್ನದ ಬಳೆಗಳು ಶೋಭಿಸುತ್ತಿದ್ದುವು ಆಕೆ ಈಚೆಗೆ ಬರುವ ವೇಳೆಗೆ ಧಣಕ್ಕನೆ ದೀಪಗಳು ಹೊತ್ತಿಕೊಂಡುದಕ್ಕೂ, ಆಕೆ ಚಲುವೆಯಾಗಿದ್ದುದಕ್ಕೂ, ಆಕೆಯ ಆಭರಣಗಳು ಬೆಳಕಿನಲ್ಲಿ ಥಳಥಳಿಸುತ್ತಿದ್ದುದಕ್ಕೂ, ಬೀರಕ್ಕನ ಕಣ್ಣುಗಳು ಕೋರೈಸಿಹೋದುವು ಆಗ ದೇವಸ್ಥಾನದ ಕೈಸಾಲೆಯಲ್ಲಿ ಅವರೀರ್ವರ ಹೊರತು ಮತ್ತಾರೂ ಇರಲಿಲ್ಲ ಬೀರಕ್ಕನು ಆಕೆಯನ್ನೇ ಬೆಕ್ಕಸ ಬೆರಗಾಗಿ ದಿಟ್ಟಿಸಿ ನೋಡುತ್ತಿದ್ದಳು ಆಕೆಯು, "ಇದೇನೆ! ಹೀಗೆ ದುರದುರನೆ ನೋಡುತ್ತೀ?" ಎಂದಳು

ಬೀರಕ್ಕ —"ಲಕ್ಷ್ಮೀದೇವಿಯ ಹಂಗೆ ಎಷ್ಟು ಚೆಂದಾಗಿದ್ದೀಯವ್ವಾ! ಅದಕ್ಕೇ ನೋಡಿದೆ"

ಆಗಂತುಕಳು ಸ್ವಲ್ಪ ನಕ್ಕು, "ನಿನ್ನ ಬೆನ್ನಿಗೆ ಕಟ್ಟಿಕೊಂಡಿರುವುದೇನು? ಮಗುವೆ?" ಎಂದಳು "ಹೌದು ತಾಯಿಾ! ಹಸಿವಿನಿಂದ ಸೊರಗಿ ನಿದ್ದೆ ಮಾಡ್ತಾ ಐತೆ ಯಾರ್‍ಯಾರನ್ನೋ ಕೇಳಿವೆ, ಕಾಸು ಹುಟ್ಟಲಿಲ್ಲ ನಾನೂ ಹಸಿದುಕೊಂಡಿದ್ದೀನಿ, ನನ್ನ ಪಾಡು ಹಂಗಿರಲಿ, ಮಗುವಿಗೆ ಹಾಲು ಹಾಕಿಲ್ಲ"

ಆಗಂತುಕಳು —"ಹಿಡಿ, ಈ ದುಡ್ಡಿಗೆ ಹಾಲು ತೆಗೆದುಕೊಂಡು ಬಂದು ಮಗುವಿಗೆ ಕುಡಿಸು, ನಾನು ಈ ಕೈಸಾಲೆಯಲ್ಲಿ ಆ ಕಡೆಗೆ ನಿಂತಿರುತ್ತೇನೆ.

ಆ ವೇಳೆಗೆ ಆಗಂತುಕಳ ಮಗಳು ಒಳಗಿನಿಂದ ಬರಲು, ತಾಯಿಯು ಪ್ರೀತಿಯಿಂದ ಅವಳ ಹೆಗಲಿನಮೇಲೆ ಕೈ ಹಾಕಿಕೊಂಡು ನಿಂತಳು. ಮಗಳು ತಾಯಿಯ ಸೀರೆಯ ನೆರಿಗೆಯನ್ನು ಕೈಯಲ್ಲಿ ಹಿಡಿದು ತನ್ನ ಅಂಗಿಯಮೇಲೆ ಅದನ್ನು ಆರೆವಾಸಿ ಹೊದೆದುಕೊಂಡು ನಿಂತಳು.

ಬೀರಕ್ಕ—"ಈ ಹೊತ್ತಿನಲ್ಲಿ ಹಾಲೆಲ್ಲಿ ತರಲಿ, ತಾಯಿ ?"

ಆಗಂತುಕಳು—"ನೂರು ನೂರಿಗೂ ಹೋಟಲುಗಳಿವೆ, ತೆಗೆದುಕೊಂಡು ಬಾರೆ!"

ಬೀರಕ್ಕನು ಹೋಗಿ ಹಾಲನ್ನು ತಂದಳು ಆ ಬಳಿಕ ಬೆನ್ನಿನ ಗಂಟನ್ನು ಬಿಚ್ಚಿ, ಮಗುವಿಗೆಲ್ಲಿ ನೋವಾದೀತೋ ಎಂಬ ಶಂಕೆಯಿಂದ ಮೆಲ್ಲಗೆ ಬಟ್ಟೆಯನ್ನು ಓರೆಮಾಡಿದಳು ಮಕ್ಕಳೇ ಚೆನ್ನ, ಅದರಲ್ಲಿಯೂ ಗಾಢನಿದ್ರೆಯಲ್ಲಿರುವಾಗ ಅವು ಮತ್ತೂ ಚೆನ್ನ, ದೇವರು ರೂಪನ್ನೂ ಕರುಣಿಸಿದ್ದರೆ ಹೇಳಬೇಕಾಗಿಯೇ ಇಲ್ಲ ಮಗುವಿನ ರೂಪನ್ನು ನೋಡಿದರೆ ಅದು ಸ್ಫುರದ್ರೂಪಿಯಾದ ಬೀರಕ್ಕನ ಮಗುವೆಂದರೂ ತಾಳಿಕೆಯಾಗುವಂತಿದ್ದಿತು ಅವಳು ಅದನ್ನು ಮಗುವೆಂದು ಭಾವಿಸಿರಲಿಲ್ಲ, ಅದು ದೇಹವನ್ನು ಧರಿಸಿ ಆಟವಾಡುವ ತನ್ನ ಪ್ರಾಣವೆಂದೇ ಅವಳ ಆಂತರವಾದ ಭಾವನೆ ಮಗುವು ಮುಟ್ಟಿದರೆ ಬಾಡುವ ಬಾಗೆಯ ಹೂವಿನಂತಿದ್ದಿತು ಬಟ್ಟೆಯು ಓರೆಯಾಗಿ ಸ್ವಲ್ಪ ಗಾಳಿಯು ಸೋಕುತ್ತಲೆ, ಅದು ಕಣ್ಣುಗಳನ್ನು ತೆರೆದು ಸುತ್ತಲೂ ನೋಡಿತು ಅದರ ನೋಟವನ್ನು ನೋಡಿದರೆ ಅದಕ್ಕೆ ಎಲ್ಲವೂ ತಿಳಿಯುವುದು ಎಂಬಂತೆ ತೋರುವ ಅನಿರ್ವಚನೀಯವಾದ ಗಾಂಭೀರ್ಯವು ಅದರ ಮುಖದಿಂದ ಉಕ್ಕಿಬರುವಂತಿದ್ದಿತು ಮತ್ತೊಮ್ಮೆ ದೃಷ್ಟಿಸಿ ನೋಡಿದರೆ, ಉತ್ತರ ಕ್ಷಣದಲ್ಲಯೇ ಅದಕ್ಕೆ ಏನೂ ತಿಳಿಯದೆಂದು ತೋರುವಂತೆ ಕಣ್ಣಿನ ದೃಷ್ಟಿಯು ಎಲ್ಲಿಯೋ ತೇಲಿಹೋಗುತ್ತಿದ್ದಿತು ಮಗುವು ಕೈಯನ್ನು ಕುಣಿಸಿ, ತನ್ನ ಚೇಷ್ಟೆಯಿಂದ ತಾನೇ ತೃಪ್ತಿಹೊಂದಿ ನಕ್ಕಿತು ಅಷ್ಟು ಹೊತ್ತಿಗೆ ಹಸಿವಿನಿಂದ ಹೊಟ್ಟೆಯು ಚುರುಗುಟ್ಟಿತೋ ಏನೋ! ಅಂತು, ಮಗುವು ಸ್ವಲ್ಪ ಅತ್ತಿತು ಬೀರಕ್ಕನು ಅದಕ್ಕೆ ಹಾಲನ್ನು ಕುಡಿಸಿದಳು ಅಳುವು ಎಲ್ಲ ಹೋಯಿತೋ! ಮಗುವು ಅರಳು ಮಲ್ಲಿಗೆಯನ್ನು ನೆನಪಿಗೆ ತರುವಂತೆ ನಕ್ಕಿತು ಬೀರಕ್ಕನ ಸಮೀಪದಲ್ಲಿ ನಿಂತು, ತಾಯಿ ಮಗಳೂ ಈರ್ವರೂ ಎವೆಯಿಕ್ಕದೆ ಇದೆಲ್ಲವನ್ನೂ ನೋಡುತ್ತಿದ್ದರು, ಹಸಿದವನು ಹಲಸಿನ ಹಣ್ಣನ್ನು ನೋಡುವಂತೆ ತೋರುತ್ತಿದ್ದರು ಮಗಳು ತಾಯಿಯೊಡನೆ, "ಅಮ್ಮಾ! ಬೀದಿಯವರ ಮಕ್ಕಳೆಲ್ಲಾ ಹೀಗಿವೆಯಲ್ಲಾ! ನಮ್ಮ

ತಮ್ಮಯ್ಯನೂ ಹೀಗೆಯೇ ಇರಬಾರದಾಗಿತ್ತೇನಮ್ಮಾ? ಇದು ಎಷ್ಟು ಚೆನ್ನಾಗಿ ಅಂಬೆಗಾಲಿಟ್ಟುಕೊಂಡು ಮುದ್ದುಬೀರುತ್ತಿದೆ!'' ಎಂದಳು ತಾಯಿಯ ಕಣ್ಣಿನಲ್ಲಿ ನೀರು ತುಂಬಿಕೊಂಡಿತು ಆದರೂ ಆಕೆಯು ದುಃಖವನ್ನು ನುಂಗಿ ಕಣ್ಣುಗಳನ್ನು ಒರಸಿಕೊಂಡು, ನಿಟ್ಟುಸಿರು ಬಿಟ್ಟು, ``ಏನೋ ಅಮ್ಮ, ನಿನ್ನ ಹೆಸರೇನೋ ನನಗೆ ತಿಳಿಯದು, ಮಗು ಚೆನ್ನಾಗಿದೆ, ನೀನೇ ಪುಣ್ಯವಂತೆ ಎಲ್ಲಿ ಮಗೂ! ನಿನ್ನ ಕೈಯಲ್ಲಿರುವ ಆ 'ಪಾಕೀಟ'ನ್ನು ತಾ, ಅವಳಿಗೆ ಏನಾದರೂ ಕೊಡೋಣ'' ಎಂದಳು ಹುಡುಗಿಯು ಒಪ್ಪದೆ, ``ಅಮ್ಮಾ! ನಾನು, ನಾನು ಕೊಡಬೇಕು'' ಎಂದಳು ತಾಯಿಯು ಸ್ವಲ್ಪ ನಕ್ಕು, ``ಹಾಗೆಯೇ ಮಾಡು'' ಎಂದಳು ಹುಡುಗಿಯು ಅವಸರ ಪಡುತ್ತ ಒಂದು ರೂಪಾಯನ್ನು ತೆಗೆದು ಬೀರಕ್ಕನ ಕೈಯಲ್ಲಿಟ್ಟಳು ತಾಯಿಯ ದೃಷ್ಟಿಯನ್ನು ನೋಡಿದರೆ, ಹುಡುಗಿಯು ಕೊಟ್ಟ ಹಣವು ಬಹಳ ಹೆಚ್ಚೆಂದು ತಿಳಿದಂತೆ ಸೂಚಿತವಾಗುತ್ತಿದ್ದಿತು ತಾಯಿಮಕ್ಕಳಿಬ್ಬರೂ ಮಗುವಿನ ಕಡೆಗೇ ತಿರುತಿರುಗಿ ನೋಡುತ್ತ ಹೊರಟುಹೋದರು

ಬೀರಕ್ಕನಿಗಂತು ಬಹಳ ಸಂತೋಷ ಮಗುವಿಗೆ ಹೊಟ್ಟೆಯ ತುಂಬ ಹಾಲು ಸಿಕ್ಕಿದುದೇ ಅದಕ್ಕೆ ಕಾರಣ ಮಗುವು ಅವಳಿಗೆ ಸಿಕ್ಕಿದಾಗ ಕೇವಲ ದಯೆಯೊಂದೇ ಅವಳು ಅದನ್ನು ಸಾಕಲು ಕಾರಣವಾಗಿದ್ದಿತು ಆದರೆ, ದಿನಗಳು ಕಳೆಯುತ್ತ ಬಂದ ಹಾಗೆಲ್ಲ—ನಿರ್ಪೋಷಿಯಾದ ಆ ಹಸುಳೆಯನ್ನು ಎತ್ತಿಕೊಂಡು ಎತ್ತಿಕೊಂಡು ಸ್ಪರ್ಶಸುಖವು ಹೆಚ್ಚುತ್ತ ಬಂದ ಹಾಗೆಲ್ಲ—ಅವಳಿಗೆ ಮಗುವಿನ ಮೇಲ ಮಮತೆಯೂ ಹೆಚ್ಚಾಯಿತು ಅವಳಿಗೆ ಮಕ್ಕಳಿಲ್ಲದುದೊಂದು, ಇದರಮೇಲೆ ಸ್ವಭಾವತಃ ಅವಳಿಗೆ ಮಕ್ಕಳನ್ನು ಕಂಡರೆ ಆಸೆಯೊಂದು, ಅದಕ್ಕೆ ತಕ್ಕಹಾಗೆ ಮಗುವೂ ಸಿಕ್ಕಿದುದೊಂದು, ಅದೂ ಕುಂಬಳದ ಹಣ್ಣಿನಂಥ ಮಗು, ಸುಂದರವಾದ ಮಗು, ತಾಯಿಯು ಕೈಬಿಟ್ಟ ಹಾಲು ಹಸುಳೆ—ಬೀರಕ್ಕನು ಇದನ್ನೆಲ್ಲ ಯೋಚಿಸುವಳು, ಯೋಚಿಸಿದಷ್ಟೂ ಅವಳಿಗೆ ಮಗುವಿನ ಮೇಲೆ ಪ್ರೀತಿಯು ಹೆಚ್ಚುವುದು ಹೆಚ್ಚೇಕೆ? ಆ ಮಗುವಿಗಾಗಿ ಪ್ರಾಣವನ್ನೊಪ್ಪಿಸುವುದಕ್ಕೆ ಕೂಡ ಅವಳು ಸಿದ್ಧವಾಗಿದ್ದಳು ಅಂಧಕಾರಮಯವಾದ ಅವಳ ಜೀವನದಲ್ಲಿ ಭಗವಂತನೇ

ಎರಡು ಬೆಳುದೀವಿಗೆಗಳನ್ನು ಉರಿಸುತ್ತಿದ್ದನು? ಒಂದು ಪತಿಪ್ರೇಮ. ಮತ್ತೊಂದು ಮಗುವಿನ ಮಮತೆ ಇವೆರಡೂ ಆ ಕಾಳಗತ್ತಲೆಗೆ ಬೆಳಕಾಗಿದ್ದುವು.

*　　*　　*　　*　　*

ಒಂದು ದಿನ ಬೆಳಗಿನ ಜಾವ ಮೂರು ಗಂಟೆಯಾಗಿರಬೇಕು; ಆಗ ನಾನು ಕೆಂಪಾಂಬುಧಿ ಕೆರೆಯ ಬಳಿಗೆ ಹೋದೆನು ಆಗ ನೋಡಿದ ದೃಶ್ಯವನ್ನು ನಾನು ಈಗ ಸ್ಮರಿಸಿಕೊಂಡರೂ ನನ್ನ ಗುಂಡಿಗೆಯು ಗುಡುಗುಟ್ಟುತ್ತದೆ ಆದರೆ, ನಾನು ಆ ನಿಶೀಥ ಸಮಯದಲ್ಲಿ ಅಲ್ಲಿಗೇತಕ್ಕೆ ಹೋದೆನೆಂದು ನೀವು ಕೇಳಬಹುದು, ಅದನ್ನೂ ಅರಿಕೆಮಾಡುತ್ತೇನೆ, ನಾನು ಒಂದು ಮೊಕದ್ದಮೆಯಲ್ಲಿ ಸಾಕ್ಷಿಯಾಗಿ ಬೆಂಗಳೂರಿಗೆ ಹೋದೆನು ರೈಲುಬಂಡಿಯು ಆ ದಿವಸ ಬೆಂಗಳೂರಿಗೆ ತಲುಪುವುದು ಎಂದಿಗಿಂತಲೂ ಬಹಳ ತಡವಾಯಿತು ನಾನು ಅಂದು ರಾತ್ರಿ ಊಟಮಾಡಿವಲ್ಲದೆ, ನನಗೆ ಯಾವ ಹೋಟಲಿನವರೂ ಮಲಗುವುದಕ್ಕೆ ಸ್ಥಳವನ್ನು ಕೊಡುವಂತಿರಲಿಲ್ಲ, ಊಟಮಾಡೋಣವೆಂದರೆ ನನಗೆ ಹಸಿವಿರಲಿಲ್ಲ ಆದುದರಿಂದ ರಾತ್ರಿ ಛತ್ರದಲ್ಲಿ ಮಲಗಿದ್ದು ಕಾಲವನ್ನು ಕಳೆಯಬೇಕೆಂದು ನಿರ್ಧರಿಸಿ, ಛತ್ರಕ್ಕೆ ಹೋದೆನು ಆದರೆ, ಅಲ್ಲಿ ಸೇರಿದ್ದವರ ಗದ್ದಲದಲ್ಲ ಬಹಳ ಹೊತ್ತು ನಿದ್ದೆಯೇ ಬರಲಿಲ್ಲ, ರಾತ್ರಿ ಸುಮಾರು ಒಂದು ಒಂದೂವರೆ ಗಂಟೆಯವರೆಗೆ ಚಿತ್ರಹಿಂಸೆಯನ್ನನುಭವಿಸಿದೆನು ಚಿಕಟಗಳು ಮೈಯನ್ನು ಕೀಳುತ್ತಿದ್ದುವು, ತಗಣಿಗಳಂತೂ ಕುದುರೆಗಳ ಹಾಗೆ ಓಡಾಡುತ್ತ ಚರ್ಮವನ್ನು ಸುಲಿಯುತ್ತಿದ್ದುವು, ಮೈಮೇಲೆ ಎಲ್ಲಿ ಮುಟ್ಟಿ ನೋಡಿಕೊಂಡರೂ ತಗಣಿಗಳೇ! ಸೊಳ್ಳೆಗಳ ಸಂಗೀತ ಬೇರೆ ಕಿವಿಗಳ ಬಳಿಯಲ್ಲಿ ಮೊಳಗುತ್ತಿದ್ದಿತು ಇಷ್ಟೂ ಸಾಲದುದಕ್ಕೆ ಹೊಗೆಯ ಸುತ್ತನ್ನು ಸೇದುವವರು ಬಿಡುತ್ತಿದ್ದ ಹೊಗೆಯು ಬೇರೆ, ಇದರ ಜೊತೆಗೆ ಸಹಿಸಲಾರದಷ್ಟು ಸೆಕೆ ಇದನ್ನೆಲ್ಲ ಸಹಿಸಿ ಸಹಿಸಿ, ನನ್ನ ಸೈರಣೆಯು ಮೀರಿತು, ನಿದ್ದೆ ಬರುವ ಸೂಚನೆಯೂ ಮಾಯವಾಯಿತು ಮಾತನಾಡೋಣವೆಂದರೆ ಅದಕ್ಕೂ ಸರಿಯಾದವರು ಸಿಕ್ಕಲಿಲ್ಲ ಆದಕಾರಣ, ಅತಿ ಬೇಸರದಿಂದ ಛತ್ರವನ್ನು ಬಿಟ್ಟು ಹೊರಟೆನು ತಂಗಾಳಿಯು ಬಹಳ

ಹಿತಕರವಾಗಿ ಬೀಸುತ್ತಿದ್ದಿತು ಎಲ್ಲಿ ನೋಡಿದರೂ ನಿಶ್ಶಬ್ದ ನಾನು ಹುಚ್ಚನಂತೆ ಗುರಿಯಿಲ್ಲದ ಗಮನದಿಂದ ಸುತ್ತಾಡತೊಡಗಿದೆನು ಪ್ರಕೃತಿ ಮಾತೆಯೇ ಮಂದಮಾರುತವೆಂಬ ಮೃದುವಾದ ಉಸಿರನ್ನು ಬಿಡುತ್ತ ನಿದ್ರಿಸುವಂತೆ ತೋರುತ್ತಿದ್ದಿತು ಅದನ್ನು ಕಂಡು ಮುಗ್ಧನಾಗಿ ಏನೇನನ್ನೋ ಯೋಚನೆಮಾಡುತ್ತ, ಎಲ್ಲಿಗೆ ಹೋಗುತ್ತಿರುವೆನೆಂಬುದರ ಪ್ರಜ್ಞೆಯೇ ಇಲ್ಲದೆ ಕೆಂಪಾಂಬುಧಿ ಕೆರೆಯ ಬಳಿಗೆ ಹೋದೆನು ಒಂದು ಸ್ತ್ರೀ ವ್ಯಕ್ತಿಯು ನೀರಿನಲ್ಲಿ ನಿಂತಿದ್ದಂತೆ ತೋರಿತು ಪ್ರತಿಕ್ಷಣದಲ್ಲಿಯೇ ಅದು ನೀರಿಗೆ ಮುಗುಚಿಕೊಂಡು ಮುಂದಕ್ಕೆ ಹಾರಿ ಧೊಪ್ಪನೆ ಬಿದ್ದ ಶಬ್ದವಾಯಿತು ಆ ವೇಳೆಗೆ ತಂತಿಯ ದೀಪಗಳೂ ಆರಿಹೋದುವು ಇಷ್ಟೂ ಮಿಂಚಿನ ವೇಗದಲ್ಲಿ ನಡೆದುಹೋಯಿತು ನಾನೂ ಗಂಟನ್ನು ಕೆಳಕ್ಕೆ ಹಾಕಿ, ಅಂಗಿಯನ್ನು ಸರಕ್ಕನೆ ಬಿಚ್ಚಿ, ರುಮಾಲನ್ನೂ ಕಿತ್ತೊಗೆದು ನೀರಿಗೆ ಧುಮ್ಮಿಕ್ಕಿದೆನು ನನಗೆ ಈಜು ಬರುತ್ತಿದ್ದುದೂ, ನಾನು ಗರಡಿ ಸಾಧನೆಯನ್ನು ಮಾಡಿ ಬಲಶಾಲಿಯಾಗಿದ್ದುದೂ ಅಂದು ಸಾರ್ಥಕವಾದಂತಾಯಿತೆಂಬುದು ನನ್ನ ಭಾವನೆ

ನೀರಿನಲ್ಲಿ ಬಿದ್ದವರನ್ನು ಈಚೆಗೆ ಸಾಗಿಸಿಕೊಂಡು ಬರುವುದು ಬಹಳ ಕಷ್ಟಸಾಧ್ಯವಾದ ಕೆಲಸ ನನ್ನ ಶ್ರಮವೇನೊ ಸಾರ್ಥಕವಾಯಿತು ಸ್ತ್ರೀ ವ್ಯಕ್ತಿಗೆ ತುಂಬ ಗಾಸಿಯಾಗಿದ್ದಿತು ಅವಳ ಆತ್ಮಹತ್ಯದ ಪ್ರಯತ್ನವನ್ನು ಕಂಡು ನನಗೆ ಮಿತಿಮೀರಿ ಕೋಪವು ಬಂದಿತು ನಾನು ಹಲ್ಲು ಹಲ್ಲು ಕಡಿಯುತ್ತ, "ನೀನು ಯಾರು?" ಎಂದು ಗರ್ಜಿಸಿದೆನು "ಬುದ್ಧೀ! ಇಲ್ಲಿಗೂ ಬಂದುಬಿಟ್ಟಿರಾ!" ಎಂದು ಹೇಳಿ ಅವಳು ಅಳತೊಡಗಿದಳು ಕಂಠಸ್ವರದಿಂದ ಅವಳು ಬೀರಕ್ಕನೆಂದು ತಿಳಿಯಿತು, ಅವಳು ಮಾಡಿದ್ದ ಹೇಯ ಕಾರ್ಯವನ್ನು ಚೆನ್ನಾಗಿ ಹಳಿದು ಅವಳನ್ನು ಮನವಾರೆ ಮೂದಲಿಸಿದೆನು ಬೀರಕ್ಕನ ದುಃಖಕ್ಕೆ ಪಾರವೇ ಇರಲಿಲ್ಲ ಕೆರೆಯ ಏರಿಯು ಕಿತ್ತು ಹೋದಾಗ ರಭಸದಿಂದ ಹೊರಡುವ ಪ್ರವಾಹದಂತೆ, ಅವಳ ದುಃಖವು ಮೇರೆದಪ್ಪಿತು ಶೋಕಾವೇಗದಲ್ಲಿ ಅವಳು ಮತ್ತೆ ಕೆರೆಗೆ ಬಿದ್ದು ಪ್ರಾಣವನ್ನು ಕಳೆದುಕೊಳ್ಳಲು ನನ್ನ ಅನುಮತಿಯನ್ನು ಬೇಡಿದಳು ಅವಳನ್ನು

ಪೋಲೀಸಿನವರಿಗೆ ಹಿಡಿದುಕೊಡುವುದಾಗಿ ಹೇಳಿ ಹೆದರಿಸಿದುದೂ ಅಲ್ಲದೆ, ಪ್ರಾಣವನ್ನು ಕಳೆದುಕೊಳ್ಳುವುದು ಮಹಾಪಾಪವೆಂದು ಅನುನಯದಿಂದ ಬುದ್ಧಿಯನ್ನೂ ಹೇಳಿದೆನು ಗಂಡನು ಮೃತಪಟ್ಟಾಗ ಕೂಡ ಆತ್ಮಹತ್ಯವನ್ನು ಮಾಡಿಕೊಳ್ಳದೆ ಇದ್ದವಳು ಈಗ ಆ ಘೋರ ಪಾತಕವನ್ನು ಕಟ್ಟಿಕೊಳ್ಳುವುದು ಸರಿಯಲ್ಲವೆಂದು ಹೇಳಿದೆನು ಅದಕ್ಕೆ ಬೀರಕ್ಕನು, "ಆಗ ಅವಮಾನವೆಲ್ಲಿತ್ತು ಬುದ್ದೀ ಈಗಿನ ಹಂಗೆ? ಆಗಲೂ ಸಾಯಬೇಕೂ ಅಂತ ನಾನು ಮನಸು ಮಾಡಿದ್ದೆ ಅವರ ಬುದ್ಧಿ ಸೂಜಿಯ ಮೊನೆ, ಸೂಜಿಯ ಮೊನೆ ಹಂಗೆ ನೋಡಿ ಮೊದಲೇ ಅವರಿಗೆ ಅದು ತಿಳಿದು, ತಮ್ಮ ರೋಗದ ಪಿರ್ಚಿನಾಗೂ, ನಾನು ಹಾಗೆ ಮಾಡಬಾರದೂ ಅಂತ ಆಣೆಯಿಟ್ಟು ಹೇಳಿದ್ದರಿಂದ ಹಂಗೆ ಮಾಡೋಕೆ ಅವರ ಆಣೆ ಅಡ್ಡವಾಯ್ತು" ಎಂದಳು

ನಾನು ಅವಳಿಗೆ ವಿಧವಿಧವಾಗಿ ವಿವೇಕವನ್ನು ಬೋಧಿಸಿದಮೇಲೆ ಅವಳು ನಮ್ಮ ಊರಿಗೆ ಬರಲು ಒಪ್ಪಿಕೊಂಡಳು, ನಮ್ಮ ಮನೆಯಲ್ಲಿಯೇ ಇರಬೇಕೆಂದು ಒಪ್ಪಂದವಾಯಿತು ಅದರಿಂದ, ನನ್ನ ಸಂತೋಷವೇ ಸಂತೋಷ ಬೀರಕ್ಕನು ನಮ್ಮ ಊರಿನಿಂದ ಹೊರಟುಹೋದಮೇಲೆ ಅವಳ ಮೈದುನನು ಅವಳನ್ನು ಹುಡುಕಿಕೊಂಡು ಬಂದಿದ್ದನು ತಮ್ಮ ತಾಯಿಗೆ ಕಾಯಿಲೆಯಾಗಿದ್ದುದರಿಂದಲೂ, ಮನೆಯ ಕೆಲಸಗಳು ಹದಗೆಟ್ಟಿದ್ದುದರಿಂದಲೂ ಬೀರಕ್ಕನನ್ನು ಕರೆದುಕೊಂಡು ಹೋಗಲು ತಾನು ಬಂದುದಾಗಿ ಅವನು ಊರಿನ ಮುಖಂಡರೆಲ್ಲರಿಗೂ ಹೇಳಿದನು ಹಿಂದೆ ಬೀರಕ್ಕನು ಅವರ ಊರಿಗೆ ಹೋಗಿ ಎಂಟು ಹತ್ತು ತಿಂಗಳು ಅಲ್ಲಿದ್ದುದನ್ನೂ, ತಮ್ಮ ಅಕ್ಕನ ಮಗುವು ರೋಗಗ್ರಸ್ತವಾಗಿದ್ದಂತೆ ಸ್ವಪ್ನವನ್ನು ಕಂಡು, ಬೀರಕ್ಕನು ನಡುರಾತ್ರಿಯಲ್ಲಿ ಯಾರಿಗೂ ಹೇಳದೆ ಊರನ್ನು ಬಿಟ್ಟು ಓಡಿಹೋದ ಕಥೆಯನ್ನೂ ಅವನು ಆದ್ಯಂತವಾಗಿ ಅವರಿಗೆ ತಿಳಿಸಿದನು ತಾವು ದುಡುಕಿ ನಡೆದು ಬೀರಕ್ಕನನ್ನು ಓಡಿಸಿದುದಕ್ಕಾಗಿ ಅವರೆಲ್ಲರಿಗೂ ಪಶ್ಚಾತ್ತಾಪವಾಯಿತು ಬೀರಕ್ಕನ ಕಷ್ಟದ ಕಥೆಯನ್ನು ಕೇಳಿ ಅವಳ ಮೈದುನನೂ ವ್ಯಥೆಪಟ್ಟನು ತಮ್ಮ ಮನೆಯವರ ಅವಿವೇಕವು ಎಷ್ಟು ಹೆಚ್ಚಿನದೆಂಬುದು ಅವನಿಗೆ ಆಗ ಚೆನ್ನಾಗಿ ತೋರಿತು ಆಗಂತುಕನು ಬೀರಕ್ಕನ ಬಂಧುವೆಂಬ

ಕಾರಣದಿಂದ, ಹಳ್ಳಿಯವರೆಲ್ಲರೂ ಅವನನ್ನು ಆದರಿಸಿ ಮನೆಮನೆಗೂ ಊಟಕ್ಕೆ ಕರೆದರು ಊಟಕ್ಕೆ ಕರೆಯುವವರು ಮೇಲಾಡಿದರೂ, ಊಟ ಮಾಡುವವನು ಎಲ್ಲರ ಮನೆಗಳಲ್ಲಿಯೂ ಏಕಕಾಲದಲ್ಲಿ ಊಟಮಾಡುವ ಬಗ ಹೇಗೆ'

ಬೆಳಗಾಯಿತು ನನಗೆ ಅಂದು ಬಹಳ ಅನುಕೂಲವಾಯಿತು. ನ್ಯಾಯಾಧೀಶರು ಅಂದು ರಜವನ್ನು ತೆಗೆದುಕೊಂಡಿದ್ದುದರಿಂದ, ನಾನು ಸಾಕ್ಷಿಯಾಗಿ ಬಂದಿದ್ದ ಮೊಕದ್ದಮೆಯ ವಿಚಾರಣೆಯು ನಡೆಯುವಂತಿರಲಿಲ್ಲ ನನ್ನ ಆಗಿನ ಸಂದರ್ಭದಲ್ಲಿ—ಬೀರಕ್ಕನು ತನ್ನ ಮನಸ್ಸನ್ನು ಬಯಲಾಯಿ ಸಲು ಅವಕಾಶವಿಲ್ಲದಂತೆ ಆದಷ್ಟು ಬೇಗ ಊರಿಗೆ ಹೊರಡಬೇಕಾಗಿದ್ದ ಆಗಿನ ಸಂದರ್ಭದಲ್ಲಿ—ಹೊರಡಲು ಅವಕಾಶ ದೊರೆತುದು ದೇವರೇ ಅನುಗ್ರಹಮಾಡಿದಂತಾಯಿತು ಆದರೆ, ಬೀರಕ್ಕನಿಗೆ ರೈಲುಬಂಡಿಯಲ್ಲೀ ಜ್ವರ ಬಂದಿತು, ಊರಿಗೆ ಹೋದಮೇಲೆ ಜ್ವರವು ಮತ್ತಷ್ಟು ಹೆಚ್ಚಿತು, ಕೊನೆಗೆ, ಅದು ವಿಷಮಶೀತಜ್ವರವೆಂದು ಗೊತ್ತಾಯಿತು

ಬೀರಕ್ಕನು ತನ್ನ 'ಬಿಂಬವು'' (ಎಂದರೆ, ದೇಹ) ಮಾತ್ರ ಊರಿಗೆ ಬರುವುದೇ ಹೊರತು ತನ್ನ ಮನಸ್ಸೇನೋ ತನ್ನ ವಶದಲ್ಲಿಲ್ಲವೆಂದು ಹೇಳಿದಳು ಕಾಲಕ್ರಮದಲ್ಲಿ ಎಲ್ಲವೂ ಸರಿಹೋಗಬಹುದೆಂಬುದು ನನ್ನ ಆಸೆ ಬೀರಕ್ಕನು ತನ್ನ ಕಷ್ಟಗಳನ್ನು ವಿವರಿಸಿ ಹೇಳಿದಳು ಧನಿಕರನೇಕರು ಅವಳಲ್ಲಿ ಕನಿಕರವನ್ನು ತೋರಿಸದೆ ಮನಸ್ವಿಯಾಗಿ ಧಿಕ್ಕರಿಸಿದುದು, ಕೆಲವರು ಧನಿಕರು ಆಗಾಗ ಅವಳಿಗೆ ಒಂದೊಂದು ಆಣೆಯನ್ನು ಕೊಡುತ್ತಿದ್ದುದು, ಬಡವರು ಕೆಲವರು ಅನ್ನವನ್ನು ಹಾಕಿ ಧನಸಹಾಯಮಾಡಲು ತಮಗೆ ಗತಿಯಿಲ್ಲವೆಂದು ವೇಚಾಡಿದುದು, ಕೆಲವರು ಕರ್ಣಕಠೋರವಾಗಿ ಅವಳನ್ನು ನಿಂದಿಸಿದುದು, ಕೂಲಿಯ ಕೆಲಸವು ಸಿಕ್ಕದೆ ಅವಳು ಕಷ್ಟಪಟ್ಟುದು, ತಾನು ಉಪವಾಸವಾದರೂ ಇದ್ದು ಅವಳು ಮಗುವನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದುದು, ಸರ್ವದಾ ತನ್ನ ಗಂಡನನ್ನು ಸ್ಮರಿಸುತ್ತ, ಆ ಮಗುವನ್ನು ನೋಡಿದ್ದರೆ ಅವನು ಎಷ್ಟು ಸಂತೋಷಪಡುತ್ತಿದ್ದನೋ

ಎಂದು ಅವಳು ಅಳುತ್ತಿದ್ದುದು, ಒಂದು ದಿನ ಅವಳೂ ಅವಳ ಮಗುವೂ ಹಸಿವಿನಿಂದ ಸೊರಗುತ್ತಿದ್ದುದು, ಆಗ ಒಬ್ಬರ ಮನೆಯ ಜಗುಲಿಯಮೇಲೆ ಅವಳು ಕುಳಿತುಕೊಂಡುದು, ಮನೆಯೊಳಗೆ ತುಪ್ಪದಲ್ಲಿ ಭಕ್ಷ್ಯವನ್ನು ಕರಿಯುತ್ತಿದ್ದ ವಾಸನೆ ಬರುತ್ತಿದ್ದುದು, ಆಗ ಅವಳು ಆಸೆಯನ್ನು ಅಡಗಿಸಲಾರದೆ, ಹುಚ್ಚಿಯಂತೆ, "ಏನು ವಾಸನೆಯಪ್ಪಾ! ವಾಸನೆಯೇ ಹಿಂಗಿದ್ದಮೇಲೆ, ಭಕ್ಷ್ಯ ಇನ್ನೆಷ್ಟು ಚೆಂದವೋ! ಕೊಟ್ಟು ಹುಟ್ಟಿದವರೆ ದೇವರೆ! ಒಂದು ದಿನವಾದಾ ನಾನು ಇಂಥ ಭಕ್ಷ್ಯ ತಿಂದಿಲ್ಲವಲ್ಲಾ! ಇವರಿಗೆ ಮಾತ್ರ ಕೊಟ್ಟು ನನಗ್ಯಾಕಣ್ಣ ಕೊಡಲಿಲ್ಲ? ಇದೇನಾ ನೀನು ಎಲ್ಲರನ್ನೂ ಒಂದೇ ಸಮ ನೋಡೋದು? ಯವ್ವಾ ಯವ್ವಾ! ಏನು ವಾಸನೆಯಪ್ಪಾ! ಜೀವ ತಲ್ಲಣಿಸಿ ಹೋಗದೆ, ನನಗೆ ಒಂದಾದರೂ ಕೊಡಬಾರದೆ!" ಎಂದು ಅವಳು ತನಗೆ ತಾನೇ ಮಾತನಾಡಿಕೊಂಡುದು, ಮಗುವಿನ ಬಾಲಲೀಲೆಗಳನ್ನು ನೋಡಿ ಅವಳು ಆನಂದಪಡುತ್ತಿದ್ದುದು, ಕೊನೆಗೆ ಕಣ್ಣಿಲ್ಲದ ದೈವಕ್ಕೆ ಅದೂ ಸೈರಿಸದೆ ಅವಳ ಮಗುವಿಗೆ ರೋಗ ಬಂದುದು, ಅದು ಸತ್ತುಹೋದುದು, ತನ್ನ ಕೈಯಲ್ಲಿದ್ದ ಬೆಳ್ಳಿಯ ಕಡಗಗಳನ್ನು ಮಾರಿ, ಅವಳು ಅದರ ಹೆಸರಿನಮೇಲೆ ಭಿಕ್ಷುಕರ ಹುಡುಗರಿಗೆ ಮಿಠಾಯಿಯನ್ನು ಹಂಚಿದುದು, ಕೊನೆಗೆ ಜನರ ಬಿರುನುಡಿಗಳನ್ನು ಕೇಳಿ ಅವಮಾನದಿಂದಲೂ ದುಃಖದಿಂದಲೂ ಬೆಂದುಹೋಗಿದ್ದ ದೇಹವನ್ನೇ ಪರಿತ್ಯಜಿಸುವ ಪ್ರಯತ್ನಮಾಡಿದುದು ಇವೆಲ್ಲ ಸಂಗತಿಗಳನ್ನೂ ಬೀರಕ್ಕನು ವಿಶದವಾಗಿ ತಿಳಿಸಿದಳು ಅದನ್ನು ಕೇಳಿ ನನಗೆ ಬಹಳ ಸಂಕಟವಾಯಿತು ನಮ್ಮ ಮನೆಯವಳಂತು ಅತ್ತು ಅತ್ತು ಸಾಕಾದಳು

ಬೀರಕ್ಕನ ರೋಗವನ್ನು ಗುಣಮಾಡಲು ನಾವು ಎಷ್ಟು ಪ್ರಯತ್ನ ಮಾಡಿದರೂ ಸಾರ್ಥಕವಾಗಲಿಲ್ಲ ಅವಳಿಗೆ ಸನ್ನಿ ಬಂದು ಜ್ಞಾನವು ತಪ್ಪಿ ಹೋಯಿತು ಆಗ ಅವಳು ಆಡುತ್ತಿದ್ದ ಮಾತುಗಳಿಂದ ಅವಳಷ್ಟು ನಿಷ್ಕಲ್ಮಷ ಹೃದಯರು ಅಪೂರ್ವವೆಂಬುದು ನನ್ನ ಮನಸ್ಸಿನಲ್ಲಿ ನಾಟಿ ಹೋಯಿತು ಎಷ್ಟು ಹಣವನ್ನಾದರೂ ವೆಚ್ಚಮಾಡಿ ಅವಳನ್ನು ಉಳಿಸಿಕೊಳ್ಳಬೇಕೆಂದು ಸರ್ವ ಪ್ರಯತ್ನವನ್ನೂ ಮಾಡಿದೆನು. ಆದರೇನು?

ದೇವರಿಗೆ ದಯೆಬರಲಿಲ್ಲ ಬೀರಕ್ಕನು, "ಬುದ್ಧೀ, ಬುದ್ಧೀ, ಅಪ್ಪಾ, ಅಪ್ಪಾ, ನೋಡಿ, ನೋಡಿ, ನಮ್ಮ ಮನೆಯೋರು ಹೆಂಗವರ ಕಿರೀಟ, ಒಡವೆ, ದೊಡ್ಡಂಚಿನ ಪಂಚೆ—ಎಲ್ಲಾ ಅವೆ ಅವರ ಕಾಲ ಹತ್ತಿರ, ಅಗೊ! ಅಗೊ! ನಾನು ಸಾಕಿದ ಮಗ ಅದಕ್ಕೆ ಮೈತುಂಬ ಒಡವೆ ನಾನು ಹಾರಿ ಹೋಯಿತ್ತಾನಿ ನಾನು ಮಾಡಿದ್ದು, ತ್ರಿಶೂಲದ ಶಿವಪೂಜೆ, ಅದರ ಫಲ ಬುದ್ಧೀ, ಬುದ್ಧೀ, ನನ್ನ ಮರೀದೆ ಜ್ಞಾಪ್ತಿ ಇಡಿ, ಹೋಗಿ ಬರ್ತೀನಿ, ಅವರು ಸಂತೋಷವಾಗಿ ನಗ್ತಾರೆ ನಾನು ಸಾಕ್ತಿದ್ದ ಮಗ,! ಅದೂ ನಗ್ತದೆ ಬಂದೆ, ಬಂದೆ" ಎಂಬ ಕೊನೆಯ ಮಾತುಗಳನ್ನಾಡಿ ಸ್ವಲ್ಪ ಕಾಲದಲ್ಲೇ ಪ್ರಾಣ ಬಿಟ್ಟಳು ಬೀರಕ್ಕನು ಸಾಕಿದುದು ಅವಳ ಭಾಗಕ್ಕೆ ಮಗುವಲ್ಲ, ಮಾರಿ, ಮಗುವಿನ ರೂಪದ ಕಾಲಮೃತ್ಯುವೆಂದರೂ ಸಲ್ಲುವುದು ಅವಳು ಮೃತಪಟ್ಟು ಇಂದಿಗೆ ಹದಿನಾಲ್ಕು ದಿನಗಳಾದುವು ಅವಳ ಅಂತರಾತ್ಮನಿಗೆ ತೃಪ್ತಿಯಾಗಲೆಂದು ಈ ದಿನ ಯಥಾಶಕ್ತಿಯಾಗಿ ಬಡವರಿಗೆ ಅನ್ನವನ್ನು ಹಾಕಿಸಿ ಸಂತರ್ಪಣೆಯನ್ನು ಮಾಡಿಸಿದೆವು ಯಾವ ಜಾತಿಯಾದರೇನು? ಯಾವ ಕುಲವಾದರೇನು? ಗುಣವು ದೊಡ್ಡದು ಸ್ವಾಮಿ, ಗುಣವೇ ದೊಡ್ಡದು ನಮ್ಮ ಬೀರಕ್ಕನ ಸಾವಿನಿಂದ ನನ್ನ ಬುದ್ಧಿಯೇ ನೆಟ್ಟಗಿಲ್ಲ, ಮನಸ್ಸಿಗೆ ಏನೋ ಒಂದು ವಿಧದ ವ್ಯಥೆ ಅವಳು ಅಣಿಮುತ್ತಿನಂಥ ಹೆಂಗಸು ಅವಳಿಗೆ ಶಿವಸಾಯುಜ್ಯವೇ ದೊರತಿರಬೇಕೆಂಬುದು ನನ್ನ ಭಾವನೆ ಏಕೆಂದರೆ, ಅವಳು ಅನುಪಮವಾದ ಭಕ್ತಿಯಿಂದ ತ್ರಿಶೂಲವನ್ನು ಪೂಜಿಸುತ್ತಿದ್ದಳು, ಪತಿಭಕ್ತಿಯಲ್ಲಂತೂ ಅವಳ ಸಮಾನರಿಲ್ಲ

——o——

# ಯಾರು ಹೆಚ್ಚು ಯಾರು ಕಡಿಮೆ?

—o—

ನಾನು ತಮ್ಮೆಲ್ಲರಿಗೂ ಪೂರ್ವ ಪರಿಚಿತನಾದ ತಮ್ಮ ಸೇವಕ ಕೃಷ್ಣಪ್ಪ ಹಳ್ಳಿ ಎಂಬುದು ನಮ್ಮ ಊರಿಗೆ ಸಮೀಪದಲ್ಲಿರುವ ಒಂದು ಗ್ರಾಮ ಅಲ್ಲಿ ಬೈರಣ್ಣನೂ ರಂಗೇಗೌಡನೂ ದೊಡ್ಡ ಒಕ್ಕಲು ಕಡಕೋಳದ ಮಂದಲಿಗೆಗಳು, ಕಬ್ಬಿಣದ ನೇರು, ತೇಗದ ಮರದ ಮಣೆಗಳು, ಒಡವೆ ವಸ್ತುಗಳು—ಇವು ಇರುವುದು ಅವರ ಮನೆಯಲ್ಲಿ ಮಾತ್ರವೇ, ಆ ಊರಿನಲ್ಲಿ ಹಿತ್ತಾಳೆಯ ಪಾತ್ರೆಗಳನ್ನು ಹೆಚ್ಚಾಗಿ ಬಳಸುವುದೂ ಅವರ ಮನೆಯಲ್ಲಿಯೇ ಅಷ್ಟೇಕೆ ' ಕಾಫಿಯನ್ನು ಕುಡಿಯುವ ಘನತೆಯು ಇರುವುದು ಕೂಡ ಆ ಊರಿನಲ್ಲಿ ಅವರ ಮತ್ತು ಪಾಸುಭೋಗರ ಮನೆಗಳಲ್ಲಿಯೇ ಅವರ ಮನೆಯಲ್ಲಿ ಗದ್ದೇಮುಡಿಯ ರುಮಾಲುಗಳು (ಕೆಂಪು ಬಣ್ಣದ ಜರತಾರಿಯ ಚೌಕಳಿಯ ರುಮಾಲುಗಳು) ಕೂಡ ಇವೆ ಆ ರುಮಾಲುಗಳು ಎರವಲಾಗಿ ಎಷ್ಟು ಜನ ಮದವಣಿಗರ ತಲೆಗಳ ಮೇಲೆ ಮೆರೆದಿವೆಯೆಂಬುದರ ಲೆಕ್ಕವನ್ನು ಹೇಳುವಹಾಗೆಯೇ ಇಲ್ಲ ಈಗಲೂ, ಬೀಗತನವನ್ನು ಬಯಸುವ ನೆಂಟರು ಇಲ್ಲಿ ಯಾರ ಮನೆಗೆ ಬಂದರೂ, ಇವರ ಮನೆಯ (ಕಡಕೋಳದ) ಮಂದಲಿಗೆಗಳು ಅಲ್ಲಿಗೆ ಮೊದಲೇ ಹೋಗಿದ್ದು ಅವರ ಮನೆಯ ಮಂದಲಿಗೆಗಳೆನಿಸಿಕೊಳ್ಳಬೇಕು ಬೈರಣ್ಣನೂ ರಂಗೇಗೌಡನೂ, ಒಟ್ಟಿನಲ್ಲಿ ಬೆಣ್ಣೆ ಬಂಗಾರಗಳಂಥ ಮನುಷ್ಯರು ಆದರೆ ಅವರಲ್ಲಿ ಒಂದು ದೊಡ್ಡ ದೋಷವಿದ್ದಿತು, ಇಬ್ಬರೂ ಹಠವಾದಿಗಳು, ಹಿಡಿದ ಚಲವನ್ನು ಅವರು ಬಿಡುವವರೇ ಅಲ್ಲ ಆ ಊರಿನ ಗ್ರಹಚಾರ ವಶದಿಂದ ಈಗ್ಗೆ ಸ್ವಲ್ಪ ಕಾಲಕ್ಕೆ ಹಿಂದೆ ಅವರಿಬ್ಬರಿಗೂ ಬದ್ಧದ್ವೇಷವುಂಟಾಗಿದ್ದಿತು ಅವರಿಬ್ಬರ ಮನೆಗಳಲ್ಲಿಯೂ ಅನೇಕ ತಲೆಮಾರುಗಳಿಂದಲೂ ಗಂಡಸರು ಹೆಂಗುಸರೆಲ್ಲರಿಗೂ ಪರಸ್ಪರ ಬಹಳ ಪ್ರೀತಿ, ಊರಿನವರೆಲ್ಲರಿಗೂ ಒಂದಲ್ಲದಿದ್ದರೆ ಮತ್ತೊಂದು ವಿಧದಲ್ಲಿ ಅವರಿಂದ ಉಪಕಾರ. ಹೀಗಿದ್ದೂ, ಅವರಿಬ್ಬರಿಗೂ

ಬದ್ಧದ್ವೇಷ ಹುಟ್ಟಿದರೆ ಅದು ಊರಿನ ಗ್ರಹಚಾರ ದೋಷವಲ್ಲವೆ ? ಆದರೆ, ನಿಮ್ಮಲ್ಲಿ ನಾಗರಿಕರೆಂದು ತಿಳಿದುಕೊಂಡಿರುವವರು ಗ್ರಹಚಾರ ದೋಷವನ್ನು ನಂಬದೆ ಇರಬಹುದು, ಅದು ನಿಮ್ಮ ಚಿತ್ತ. ನಾನು ಬೇಡವೆಂದರೂ ಕೇಳದೆ ಅಗ್ನಿಮೂಲೆಗೆ ಮನೆಯನ್ನು ಕಟ್ಟಿದ ಇಬ್ಬರು ಗೃಹಸ್ಥರು ಗೃಹಪ್ರವೇಶವಾದ ವರುಷದಲ್ಲೇ ಸತ್ತುದೇಕೆ ? ಒಬ್ಬನು ಸತ್ತಿದ್ದರೆ ನಾನು ಆಕಸ್ಮಿಕವೆನ್ನುತ್ತಿದ್ದೆ. ಪಾಪ! ಇಬ್ಬರೂ ಸತ್ತರಲ್ಲಾ! ಅದೂ ಆಕಸ್ಮಿಕವೆಂದರೆ, ನಿಮ್ಮ ಅಭಿಪ್ರಾಯವನ್ನು ನೀವೇ ಇಟ್ಟುಕೊಳ್ಳಿ. ಮದುವೆಗಳಲ್ಲಿ, “ನಿಮ್ಮ ಅಕ್ಕಿಯ ಆನೆಗೂ ನನ್ನ ಉಪ್ಪಿನ ಆನೆಗೂ ಬೆಲೆ ಸರಿಬೀಳುವುದಿಲ್ಲ; ನಿಮ್ಮ ಅಕ್ಕಿಯ ಆನೆ ನಿಮ್ಮಲ್ಲೇ ಇರಲಿ, ನನ್ನ ಉಪ್ಪಿನ ಆನೆ ನನ್ನಲ್ಲೇ ಇರಲಿ” ಎಂದು ಮದುಮಗಳು ಹೇಳುವುದನ್ನು ನೀವು ಕೇಳಿಯೇ ಇದ್ದೀರಿ. ನಮ್ಮ ನಿಮ್ಮ ಅಭಿಪ್ರಾಯಗಳು ಬೇರೆಯಾದರೂ, ನಮ್ಮ ನಮ್ಮ ವಿಶ್ವಾಸವೇನೂ ಕೆಡಬೇಕಾಗಿಲ್ಲ. ಇದು ಹೋಗಲಿ. ರಂಗೇಗೌಡನಿಗೂ ಬೈರಣ್ಣನಿಗೂ ಮಧ್ಯದಲ್ಲಿ ಹಸಿಯ ಹುಲ್ಲನ್ನಿಟ್ಟರೆ ಧಗ್ಗೆಂದು ಉರಿಯುವಷ್ಟು ದ್ವೇಷವು ಹುಟ್ಟಿದ್ದಿತು, ಅದೂ, ತಕ್ಕಷ್ಟು ಕಾರಣವಿಲ್ಲದ ದ್ವೇಷ. ತಕ್ಕಷ್ಟು ಕಾರಣವಾದರೂ ಇದ್ದಿದ್ದರೆ ನಾನು ಪೇಚಾಡುತ್ತಲೇ ಇರಲಿಲ್ಲ. ಅವರಿಗೆ ದ್ವೇಷವು ಹುಟ್ಟಿ ಬೆಳೆದ ಕಥೆಯನ್ನು ಹೇಳುತ್ತೇನೆ, ಅವರಲ್ಲಿ ಯಾರು ಹೆಚ್ಚು, ಯಾರು ಕಡಿಮೆ ಎಂಬುದನ್ನು ನೀವೇ ತಿಳಿದುಕೊಳ್ಳಿರಿ.

ರಂಗೇಗೌಡನ ಮನೆಯ ಪಕ್ಕದಲ್ಲಿಯೇ ಬೈರಣ್ಣನ ಮನೆ. ಎರಡು ಮನೆಗಳ ಹಿತ್ತಿಲಿಗೂ ನಡುವೆ ಒಂದು ಗೋಡೆ ಅಡ್ಡ, ಅಷ್ಟೆ. ಇಬ್ಬರ ಮನೆಯ ಹಿತ್ತಿಲಿನಲ್ಲಿಯೂ ತೆಂಗಿನ ಮರಗಳು. ಒಂದು ದಿನ ಒಂದು ಹಣ್ಣುತೆಂಗಿನಕಾಯಿ ಕೆಳಕ್ಕೆ ಬಿದ್ದಿತು. ಅದು ಬೈರಣ್ಣನ ಹಿತ್ತಿಲಿನಲ್ಲಿದ್ದ ಮರದ ಕಾಯಿ. ಅದು ಕೆಳಗೆ ಬೀಳುವಾಗ ಸಮೀಪದಲ್ಲಿದ್ದ ಒಂದು ಕರಿಬೇವಿನ ಮರದ ಕೊಂಬೆಗೆ ತಗುಲಿ ರಂಗೇಗೌಡನ ಹಿತ್ತಿಲಿಗೆ ಬಿದ್ದಿತು; ಆಗ ಬೈರಣ್ಣನ ಹೆಂಡತಿ ಕಾಳಮ್ಮನು ಕೀರೆಯ ಸೊಪ್ಪನ್ನು ಕೊಯ್ಯುತ್ತಿದ್ದವಳು ಅದನ್ನು ನೋಡಿದಳು. ರಂಗೇಗೌಡನ ಮನೆಯವರು ಯಾರೂ ಅವರ ಹಿತ್ತಿಲಿನಲ್ಲಿರಲಿಲ್ಲ. ತೆಂಗಿನಕಾಯನ್ನು ತನಗೆ ಕೊಡುವಂತೆ ಕೇಳಿ

ಅದನ್ನು ತೆಗೆದುಕೊಂಡು ಬರಲು ಕಾಳಮ್ಮನು ನೆರೆಮನೆಗೆ ಹೋದಳು. ರಂಗೇಗೌಡನ ಹೆಂಡತಿ ಚೆನ್ನಮ್ಮನು ಆಗ ತನ್ನ ಮಗಳನ್ನು ಹೊಡೆಯುತ್ತಿದ್ದಳು. ಆ ಹುಡುಗಿಗೆ ಹಿಂದಿನ ದಿನ ಮೊಗ್ಗಿನ ಜಡೆಯನ್ನು ಹಾಕಿ ಚೆನ್ನಮ್ಮನ ಹೊಸ ರೇಷ್ಮೆಯ ದೊಡ್ಡ ಸೀರೆಯನ್ನು ಉಡಿಸಿದ್ದರು. ಬದನೆಯ ಕಾಯಿಯು ಅಕಸ್ಮಾತ್ತಾಗಿ ಕುಂಬಳಕಾಯಿಯಾಗಿ ಮಾರ್ಪಾಡು ಹೊಂದಿದಂತೆ ಅವಳು ಕಾಣುತ್ತಿದ್ದಳು. ಮರುದಿನವೂ ಅವಳು ಅದೇ ಸೀರೆಯನ್ನೇ ಉಟ್ಟಿದ್ದಳು. ಆ ದಿನ ಹರಳೆಣ್ಣೆಯನ್ನು ತೆಗೆಯಲು ಅಂಗಳದಲ್ಲಿ ಹರಳನ್ನು ಬೇಯಿಸುತ್ತಿದ್ದ ಒಲೆಯು ಉರಿಯುತ್ತಿದ್ದಿತು. ಬೆಂದ ಹರಳು ನೀರಿನೊಡನೆ ಕುದಿಯುತ್ತಿದ್ದುದು ಹುಡುಗಿಗೊಂದು ಸೋಜಿಗ. ಚೆನ್ನಮ್ಮನು ಆಗ ಮನೆಯಲ್ಲಿರಲಿಲ್ಲ. ಹುಡುಗಿಯು ಪಟ್ಟೆಯ ಸೀರೆಯನ್ನು ಬಿಚ್ಚಿ ಬೇರೆ ಸೀರೆಯನ್ನುಟ್ಟುಕೊಂಡಳು, ಆದರೆ, ಪಟ್ಟೆಯ ಸೀರೆಯನ್ನು ಮಡಿಸಿ ಪೆಟ್ಟಿಗೆಯೊಳಗಿಡಲಿಲ್ಲ, ಹರಳು ಕುದಿಯುವುದನ್ನು ನೋಡುವ ಸಡಗರದಲ್ಲಿ ಹೊಸ ಸೀರೆಯನ್ನು ಹಾಲಿನ ಒಲೆಯ ಮುಂದೆಯೇ ಬಿಟ್ಟುಬಿಟ್ಟು ಓಡಿಹೋದಳು. ಹೇಗೋ ಅದಕ್ಕೆ ಕಿಡಿಗಳು ಹಾರಿ ಸೀರೆ ಸುಟ್ಟುಹೋಯಿತು. ಚೆನ್ನಮ್ಮನು ಮನೆಗೆ ಬಂದು ಈ ಅನ್ಯಾಯವನ್ನು ನೋಡಿ, ಹುಡುಗಿಯ ಮೇಲೆ ಕೋಪಿಸಿಕೊಂಡು ಅವಳನ್ನು ಹೊಡೆಯತೊಡಗಿದಳು. ಹುಡುಗಿಯು ಸುಮ್ಮನಿರದೆ "ನೀನ್ಯಾಕೆ ಮನೆಯಿಂದ ಹೋದದ್ದು?" ಎಂದುಬಿಟ್ಟಳು. ಉರಿಯುವ ಹುಣ್ಣಿನಲ್ಲಿ ಉಪ್ಪು ಬಿದ್ದಂತಾಗಿ ಪೆಟ್ಟುಗಳು ಮತ್ತಷ್ಟು ರಭಸದಿಂದ ಬೀಳಲು ಕಾರಣವಾಯಿತು.

ಕಾಳಮ್ಮನು ರಂಗೇಗೌಡನ ಮನೆಗೆ ಹೋದುದು ಇದೇ ಸಮಯದಲ್ಲಿ. ಅವಳು ವಿಷಯವೇನೆಂದು ವಿಚಾರಿಸಿ, ಹುಡುಗಿಯನ್ನು ಉಸಿರು ಹತ್ತಿಬರುವಂತೆ ಹೊಡೆದುದು ಸರಿಯಲ್ಲವೆಂದು ಚೆನ್ನಮ್ಮನನ್ನು ಗದರಿಸಿ, ಹುಡುಗಿಯನ್ನು ಬಿಡಿಸಿ ಅಪ್ಪಿಕೊಂಡಳು. ಇದು ಚೆನ್ನಮ್ಮನಿಗೆ ಸರಿಬೀಳಲಿಲ್ಲ. ತನ್ನ ಮಗಳನ್ನು ತಾನು ಹೊಡೆದರೆ ನೆರೆಯವಳಿಗೇನೆಂಬುದೇ ಅವಳ ಮನಸ್ಸಿನ ಕೊರತೆ. ಅಲ್ಲದೆ, ತಾನು ಮಾಡುತ್ತಿದ್ದುದು ಒಳ್ಳೆಯ ಕೆಲಸವೆಂಬ ಉತ್ಸಾಹದಲ್ಲಿ ಕಾಳಮ್ಮನು ಯುಕ್ತಾಯುಕ್ತ ವಿವೇಚನೆಯಿಲ್ಲದೆ

ಚೆನ್ನಮ್ಮನನ್ನು ಗದರಿಸಿಕೊಂಡುದರಿಂದ ಚೆನ್ನಮ್ಮನಿಗೆ ಮತ್ತಷ್ಟು ರೇಗಿ ಹೋಯಿತು, ಆದರೂ, ತಾನು ಮಗಳನ್ನು ಅಷ್ಟೊಂದು ಹೊಡೆದುದು ತಪ್ಪೆಂದು ಅವಳಿಗೆ ತೋರಿ, ಯಾವ ಮಾತನ್ನೂ ಆಡುವುದಕ್ಕಿಲ್ಲದೆ ಸುಮ್ಮನಾದಳು. ಹೀಗಾದರೂ ಅವಳ ಹೃದಯದ ಕೋಪವು ಒಳಗೊಳಗೆ ತನ್ನ ನಾಲಗೆಯನ್ನು ಚಾಚುತ್ತಲೇ ಇದ್ದಿತು. ಈ ಸಮಯದಲ್ಲಿ ಕಾಳಮ್ಮನು ತೆಂಗಿನ ಕಾಯಿಗಾಗಿ ತಾನು ಬಂದ ಸಂಗತಿಯನ್ನು ತಿಳಿಸಿದಳು. ಚೆನ್ನಮ್ಮನು ಒಡನೆಯೇ ತನ್ನ ಬುದ್ಧಿಯನ್ನು ನಾಗಾಲು ಓಟದಲ್ಲಿ ಓಡಿಸಿಬಿಟ್ಟಳು. ತಮ್ಮ ಗಿಡದ ತೆಂಗಿನ ಹಣ್ಣನ್ನು ಹೊತ್ತು ಹಾಕಲು ಕುಂಟು ನೆವವನ್ನು ಕಲ್ಪಿಸಿಕೊಂಡು, ಹುಡುಗಿಯನ್ನು ಬಿಡಿಸಿಕೊಳ್ಳುವ ಈ ಆಟವನ್ನು ಕಾಳಮ್ಮನು ಹೂಡಿರಬೇಕೆಂದು ಒಂದು ಕ್ಷಣಮಾತ್ರದಲ್ಲಿ ಅವಳು ನಿರ್ಧರಿಸಿದಳು. ಇಂತಹ ದುರುದ್ದೇಶದಿಂದ ತಮ್ಮ ಮನೆಗೆ ಬಂದೂ, ಇನ್ನೂ ಹರೆಯದ ಹುಡುಗಿಯಾದ ಈ ಚಿಕ್ಕವಳು ಪ್ರೌಢಯಾದ ತನ್ನನ್ನು ಗದರಿಸಿದ ಗಯ್ಯಾಳಿತನವನ್ನು ತನ್ನ ಮನಸ್ಸಿನಲ್ಲಿಯೇ ನೂರು ಬಾರಿ ಹಳಿದಳು. ಕೊನೆಗೆ ಸೈರಿಸಲಾರದೆ, "ಏನು ಕಾಳಮ್ಮಾ! ತೆಂಗಿನಕಾಯಿ ಆಸೆಗೆ ಇಷ್ಟು ಮಾಯಾಂಗನೆಯ ಕೆಲಸ ಮಾಡಿದ್ಯಾ? ನಮ್ಮಗೆ ಕೇಳಿದ್ದರೆ ನಾನು ಕೊಡ್ತಾ ಇರಲಿಲ್ಲವ" ಎಂದಳು. ಇದು ಕಾಳಮ್ಮನಿಗೆ ಸೈರಿಸಲಿಲ್ಲ. ಅವಳು, "ಅಲ್ಲವೇ ಗಯ್ಯಾಳಿ! ನನ್ನ ಮಾಯಾಂಗನೆ ಅಂತೀಯಾ? ನಿಮ್ಮವ್ವ ಮಾಯಾಂಗನೆ" ಎಂದಳು. ಇಬ್ಬರಿಗೂ ಜಗಳವು ಹತ್ತಿತು. ಕಾಳಮ್ಮನು ಓಡಿ ಹೋಗಿ ತೆಂಗಿನಕಾಯನ್ನು ತೆಗೆದುಕೊಂಡಳು, ಚೆನ್ನಮ್ಮನು ಅದನ್ನು ಹಿಡಿದು ಎಳೆದಳು, ಮಾತಿನ ಹೋರಾಟ ಬೇರೆ. ಇಬ್ಬರಲ್ಲಿ ಚೆನ್ನಮ್ಮನ ಮಗ—ಸಣ್ಣ ಹುಡುಗ—ಓಡಿಬಂದು, "ನಮ್ಮವ್ವನನ್ನ ಬೈದೀಯಾ!" ಎಂದು ಕಾಳಮ್ಮನನ್ನು ಗುದ್ದಿದನು. ತಾಯಿಯು ಅವನನ್ನು ಪ್ರೋತ್ಸಾಹಿಸಿ ಹೊಗಳಿದಳು. ಹುಡುಗನು ಹುರಿಗೊಂಡು ಮತ್ತೆರಡು ಗುದ್ದುಗಳನ್ನು ಹೊಡೆದನು. ಕಾಳಮ್ಮನು ಈ ಅಪಮಾನವನ್ನು ತಾಳಲಾರದೆ ಹುಡುಗನಿಗೆ ಎರಡು ಪೆಟ್ಟು ಕೊಟ್ಟಳು. ಅವನು ಅಳತೊಡಗಿದನು, "ಹಾಲುಕಂದನ್ನ ಹೊಡೆದೀಯಾ?" ಎಂದು ಚೆನ್ನಮ್ಮನು ಕಾಳಮ್ಮನ

ತುರುಬು ಹಿಡಿದು ಎಳೆಯತೊಡಗಿದಳು. ಮುಂದೆ ಗೊತ್ತೇ ಇದೆ. ಕೇಶಾಕೇಶಿ, ಹಣಾಹಣಿ ಯುದ್ಧ. ಈ ರಗಳೆಯು ನಡೆಯುತ್ತಿರುವಲ್ಲಿ ರಂಗೇಗೌಡನೂ ಬೈರಣ್ಣನೂ ಓಡಿಬಂದು ತಮ್ಮ ತಮ್ಮ ಹೆಂಡತಿಯ ಪಕ್ಷವನ್ನು ಹಿಡಿದು ಕಾದಾಟಕ್ಕೆ ನಿಂತರು. ಕೋಲುಗಳಿಂದ ಹೊಡೆದಾಟ, ಗದ್ದಲವೋ ಗದ್ದಲ. ನೆರೆಹೊರೆಯವರೆಲ್ಲರೂ ಒಟ್ಟುಗೂಡಿದರು. ಬೈರಣ್ಣನು ರಂಗೇಗೌಡನಿಗಿಂತಲೂ ಬಲಿಷ್ಠ. ಆದುದರಿಂದ ಹೊಡೆದಾಟದಲ್ಲಿ ಅವನ ಕೈ ಮೇಲಾಯಿತು. ಕೊನೆಗೆ ನೆರೆಹೊರೆಯವರೆಲ್ಲರೂ ಕೂಡಿ ಜಗಳವನ್ನು ಬಿಡಿಸಿದರು. ಬಳಿಕ, ಜಗಳವು ಹುಟ್ಟುವುದಕ್ಕೆ ಕಾರಣವೇನೆಂಬ ವಿಚಾರಣೆಯೂ ನಡೆಯಿತು. ರಂಗೇಗೌಡನಿಗೂ ಬೈರಣ್ಣನಿಗೂ ಸಹ ಜಗಳದ ಕಾರಣವು ಗೊತ್ತಾದುದು ಆಗಲೇ. ಊರವರು ಜಗಳದ ಕಾರಣವು ತಿಳಿಯುವುದಕ್ಕೆ ಮೊದಲೇ ಹೊಡೆದಾಡಿದರು. ಯಾರು ಎಷ್ಟು ಪಂಚಾಯಿತಿಯನ್ನು ಮಾಡಿದರೂ ತೆಂಗಿನಕಾಯಿಯು ಯಾರಿಗೆ ಸೇರಿದುದೆಂಬುದು ವ್ಯವಸ್ಥೆ ಬೇರೆ ಆಗಲಿಲ್ಲ. ಕಾಳಮ್ಮನ ವಾದಕ್ಕೂ ಪಂಚಾಯಿತರಲ್ಲಿ ಉತ್ತರವಿಲ್ಲ. ಚಿನ್ನಮ್ಮನ ವಾದಕ್ಕೂ ಅವರು ಉತ್ತರ ಹೇಳರು. ಚರ್ಚೆಯೇನೋ ಬೇಕಾದಷ್ಟು ನಡೆಯಿತು. ಆದರೂ ಫಲಿತಾಂಶವೇನೊ, ಪಟ್ಟಣಗಳಲ್ಲಿ ಸಮಾಜ ಸುಧಾರಣೆಯ ಮೇಲೆ ಅಥವಾ ಇತರ ವಿಷಯಗಳ ಮೇಲೆ ಉಪನ್ಯಾಸಗಳು ನಡೆದ ಬಳಿಕ ಉಂಟಾಗುವ ಫಲಿತಾಂಶದಷ್ಟೇ. ಅಂತು, ಹೊಡೆದಾಟವು ನಿಂತಿತು. ಊರ ಯಜಮಾನನು—ಹಣ್ಣು ಮುದುಕ ಹನುಮಂತೇಗೌಡನು—ಅಂದು ಊರಿನಲ್ಲಿರಲಿಲ್ಲ. ಅವನು ಮಾತ್ರ ಊರಿನಲ್ಲಿದ್ದ ಪಕ್ಷಕ್ಕೆ ಈ ಹಗರಣವೆಲ್ಲ ನಡೆಯುತ್ತಿರಲಿಲ್ಲವೆಂದು ಕೆಲವರು ಗಟ್ಟಿಯಾಗಿ ಹೇಳಿ, ತಮ್ಮ ವಿಮರ್ಶಾ ಗುಣಕ್ಕೆ ತಾವೇ ಮೆಚ್ಚಿ ಮೀಸೆಯನ್ನು ಹುರಿಮಾಡಿಕೊಂಡರು. ಅವರ ಪ್ರಾಜ್ಞತೆಗೆ ಮೆಚ್ಚಿದವರು ಕೆಲವರು ಶ್ರೀಮದ್ಗಾಂಭೀರ್ಯದಿಂದ ತಲೆದೂಗಿದರು. ಗಿರಿಜಾ ಮೀಸೆಯ ಒಬ್ಬ ಮುದುಕನೂ ಜಗಳವನ್ನು ಬಿಡಿಸುವುದರಲ್ಲಿ ಭಾಗಿಯಾಗಿದ್ದನು. ಅವನ ರುಮಾಲು ಬಿಚ್ಚಿಹೋಗಿ ಅದರ ಸೆರಗಿನಲ್ಲಿ ಸುತ್ತಿಸಿಕೊಂಡಿದ್ದ ಅಡಿಕೆಯ ಪುಡಿಯು ಚೆಲ್ಲಿಹೋಯಿತು. ಅವನಿಗೆ ಅದರ ಮೇಲೆ ಆಸೆ, ಆದರೆ ಅಷ್ಟು

ಭಾರಿ ಗಿರಿಜಾ ಮೀಸೆಯನ್ನಿಟ್ಟುಕೊಂಡು ಕೆಳಗೆ ಚೆಲ್ಲಿಹೋದ ಅಡಿಕೆಯ ಪುಡಿಯನ್ನು ಆರಿಸಿಕೊಳ್ಳಲು ಅವಮಾನ ಕೈಬಿಟ್ಟು ಹೋದ ಮಾನನ್ನು ನೋಡಿ ಬೆಸ್ತನು, "ಧರ್ಮ ಬಂತು, ಹೋಗು ಮಾನೇ—" ಎಂದು ಹೇಳಿದಂತೆ, ಆ ಮುದುಕನೂ, "ಹೋಕ್ಕೊಳ್ಳಿ, ಭೂಮಿತಾಯಿಗೆ ತೃಪ್ತಿಯಾಯಿತು" ಎಂದುಕೊಂಡನು ಆಮೇಲೆ ಪ್ರಕಾಶವಾಗಿ, "ಆನೆಕಲ್ಲು ಬೀಳೋದು ತಪ್ಪಿಸಿಬಿಟ್ರೋ ಮಳೆ ನಿಧಾನದಾಗೆ ನಿಂತು, ಬೇಕಾದಾಗ ಬಿಸಿಲು ಬರಲಿ!" ಎಂದು ರಾಗವಾಗಿ ಹೇಳಿ, ಬಿಚ್ಚಿಹೋಗಿದ್ದ ರುಮಾಲನ್ನು ಮತ್ತೆ ಸುತ್ತಿಕೊಂಡು ಆಕಳಿಸಿದನು ಎಲ್ಲರೂ ಅವರವರ ಮನೆಗೆ ಹೋದರು ಊರಿನವರೆಲ್ಲರೂ ಊಟಮಾಡಿ ಯಥಾ ಕಾಲದಲ್ಲಿ ಮಲಗಿ ನಿದ್ದೆಹೋದರು ಆದರೆ, ರಂಗೇಗೌಡ, ಚೆನ್ನಮ್ಮ, ಬೈರಣ್ಣ, ಕಾಳಮ್ಮ— ಈ ನಾಲ್ಕರಿಗೆ ಮಾತ್ರ ಮುಂದೆ ತಾವು ಹೇಗೆ ಮೂಗನ್ನುಳಿಸಿಕೊಳ್ಳಬೇಕೆಂಬ ಯೋಚನೆಯಿಂದ, ಅಂದು ಏಕಾದಶಿಯಲ್ಲದಿದ್ದರೂ ಜಾಗರಣೆಯಾಯಿತು ಎಂದ ಮಾತ್ರನೇ ಅವರು ಪ್ರತಿ ಏಕಾದಶಿಯ ದಿನವೂ ಜಾಗರಣೆಮಾಡುತ್ತಿದ್ದರೆಂದು ಅರ್ಥವಲ್ಲ ಈಗಿನ ಕಾಲದಲ್ಲಿ ಮರಮುದ್ರೆಗಳೇ ಮುಂತಾಗಿ ಎಷ್ಟೆಷ್ಟೋ ದೊಡ್ಡದೊಡ್ಡವರೇ ಈ ತೊಂದರೆಯನ್ನು ತಪ್ಪಿಸಿಕೊಂಡಿದ್ದಾರೆ ಪಾಪ! ಈ ನಾಲ್ವರೂ ಮಾಡಿದ ತಪ್ಪೇನು ? ಇಷ್ಟಕ್ಕೂ ಏಕಾದಶಿಯ ದಿನ ಜಾಗರಣೆಯು ಒಳ್ಳೆಯದೋ ಅಲ್ಲವೋ ಸರಿಯಾಗಿ ಹೇಳುವವರು ತಾನೇ ಯಾರು ? ಈ ಮಾತು ಹೋಗಲಿ, ರಂಗೇಗೌಡನು ಅಂದು ಅವಮಾನವಾದ ವ್ಯಥೆಯಲ್ಲಿ ಅರೆಹೊಟ್ಟೆ ಊಟಮಾಡಿ, ಆ ಬಳಿಕ ನಿದ್ದೆಯೂ ಇಲ್ಲದೆ ಬೈರಣ್ಣನು, ಹೊಡೆದಾಟದಲ್ಲಿ ತನ್ನ ಕೈಮೇಲಾಗಿದ್ದೂ, ಮತ್ತೆರಡು ಏಟುಗಳನ್ನು ಕೊಡದಂತೆ ಊರಿನವರು ತಡೆದು, ದೊಡ್ಡ ಕೊಡಲಿಯ ಬಾಯಿಯು ಮುಕ್ಕಾಗುವಂತೆ ಮಾಡಿದರಲ್ಲಾ—ಎಂದು ಚಿಂತಿಸತೊಡಗಿದನು ಮಧ್ಯೇ ಮಧ್ಯೇ ಕಾಳಮ್ಮನ ಸಲಹೆಯು ಬೇರೆ ಅಂತು, ತಾವು ನಿಷ್ಪಕ್ಷಪಾತವಾಗಿ ಯೋಚನೆಮಾಡುತ್ತಿರುವಂತೆಯೇ ಭಾವಿಸಿ ರಂಗೇಗೌಡನೂ ಬೈರಣ್ಣನೂ ಇಬ್ಬರೂ ಗುಣಿತಹಾಕಿದರು ಇವರಲ್ಲಿ ಇಬ್ಬರಿಗೂ ತಮ್ಮತಮ್ಮ ಹೆಂಡತಿಯು ಮಾಡಿದುದೇ ನ್ಯಾಯವೆಂದೂ, ಎದುರು ಕಡೆಯವರ ಅಪರಾಧವು ಕ್ಷಮಿಸ

ತಕ್ಕುದಲ್ಲವೆಂದೂ ನಿರ್ಧರವಾಯಿತು ಆದುದರಿಂದ, ಏಟುಗಳು ಬಿಡುದಕ್ಕೆ ನ್ಯಾಯಸ್ಥಾನದಲ್ಲಿ (ಕೋರ್ಟಿನಲ್ಲಿ) ವ್ಯವಹಾರವನ್ನು ನಡೆಯಿಸಬೇಕೆಂದೇ ಇಬ್ಬರೂ ಖಂಡಿತ ಮಾಡಿದರು

ಕೋಳಿ ಕೂಗಿದುದೇ ತಡ , ರಂಗೇಗೌಡನೂ ಬೈರಣ್ಣನೂ, "ಸರ್ಟಿಪ್ಪನ್‌ಕೇಟಿಗೆ" (ಸರ್ಟಿಫಿಕೇಟಿಗೆ) "ಡಾಗ್ದರಿಯ" (ವೈದ್ಯರ) ಬಳಿಗೆ ಹೋಗುವುದಕ್ಕಾಗಿ ನೆರೆಯೂರಿಗೆ ಪ್ರಯಾಣಮಾಡಲು ಕೂಡಲೆ ಸಿದ್ಧರಾದರು ನ್ಯಾಯಸ್ಥಾನವಿದ್ದುದೂ ಅದೇ ಊರಿನಲ್ಲಿಯೇ ರಂಗೇಗೌಡನು ತಾನು ಹೊರಟುದು ಬೈರಣ್ಣನಿಗೆ ಗೋಚರವಿಲ್ಲದಂತೆ ಆಸ್ಪತ್ರೆಗೆ (ವೈದ್ಯಶಾಲೆಗೆ) ಹೋಗಬೇಕೆಂದು ಮನಸ್ಸು ಮಾಡಿ, ಎಲ್ಲರೂ ತಿರುಗುವ ದಾರಿಯಲ್ಲಿ ಹೊರಟರೆ ಒಂದುವೇಳೆ ಬೈರಣ್ಣನು ತನ್ನನ್ನು ಕಾಣಬಹುದೆಂದು ಅನುಮಾನಪಟ್ಟು, ತಾನು ಬೇರೆ ದಾರಿಯಲ್ಲಿ ಬಳಸಿಕೊಂಡು ಹೋಗಬೇಕೆಂದು ಯೋಚಿಸಿದನು ಇತ್ತ ಬೈರಣ್ಣನೂ ಅದೇರೀತಿ ಮಾಡಿದನು ಆದರೂ ಇಬ್ಬರೂ ಊರಿನ ಮುಂದೆ ಸಂಧಿಸಿದರು ಬೆಳಗಾಗುವ ಮುಂಚೆಯೇ ಈ ಹಾಳು ಕಾಗೆ ಮೋರೆಯನ್ನು ನೋಡಿದೆನೆಂದು ರಂಗೇಗೌಡನು ಗೊಣಗಿದನು ಬೈರಣ್ಣ ಸ್ವಲ್ಪ ಕಪ್ಪು ರಂಗೇಗೌಡನ ಗೊಣಗಾಟವನ್ನು ಕೇಳಿ ಅವನಿಗೆ ರೇಗಿತು ಹೊತ್ತು ಏರಿ ಸ್ವಾಮಿಯ ದರ್ಶನವಾಗುವ ಮುಂಚೆ ಗೂಬೆ ಮೋರೆಯನ್ನು ತಾನು ನೋಡಬೇಕಾಗಿ ಬಂದಿತಲ್ಲಾ ಎಂದು ಬೈರಣ್ಣನು ಗೊಣಗಿದನು ಅಷ್ಟರಲ್ಲ ಇಬ್ಬರೂ ಮಾರಮ್ಮನ ಗುಡಿಯ ಮುಂದಕ್ಕೆ ಬಂದರು ದೇವರ ಗುಡಿಯ ಮುಂದೆ ಜಗಳವಾಡಿದರೆ ಪ್ರಯಾಣ ಹೊರಟ ಕೆಲಸವು ಕೆಟ್ಟುಹೋಗುವುದೆಂದು ನಮ್ಮಲ್ಲಿ ಹಳ್ಳಿಯವರೆಲ್ಲರಿಗೂ ನಂಬಿಕೆ ಆದುದರಿಂದ ಜಗಳಕ್ಕೆ ಅವಕಾಶವಿಲ್ಲದೆ ಹೋಯಿತು ತಮ್ಮ ಕಾರ್ಯವು ಕೈಗೂಡುವಂತೆ ಇಬ್ಬರೂ ಮಾರಮ್ಮನನ್ನು ಪ್ರಾರ್ಥಿಸಿಕೊಂಡರು ಈ ಬಗೆಯ ಪ್ರಾರ್ಥನೆಯು ಬಂದಾಗ ಭಕ್ತರ ಕೋರಿಕೆಯನ್ನು ಸಲ್ಲಿಸುವುದು ಮಾರಮ್ಮನಿಗೂ ಕಷ್ಟವೇ ಅದಕ್ಕಾಗಿಯೇ ಆ ದೇವತೆಯು ಕೆಲವು ವೇಳೆ ತಟಸ್ಥಳಾಗಿದ್ದುಬಿಡುವಳೆಂದು ನನ್ನ ಬುದ್ಧಿಗೆ ತೋರುತ್ತದೆ ರಂಗೇಗೌಡನೂ ಬೈರಣ್ಣನೂ ಇಬ್ಬರೂ ಪ್ರಾರ್ಥನೆಯನ್ನು ಮುಗಿಸಿ

ಕೊಂಡು, ಒಬ್ಬೊಬ್ಬರು ಒಂದೊಂದು ದಾರಿಯನ್ನು ಹಿಡಿದು ಹೊರಟು ಹೋದರು. ಹಿಂದೆ, ಪರ್ವತಮುನಿಯೂ ನಾರದಮುನಿಯೂ ಇದೇ ಬಗೆಯ ವರ್ತನೆಯನ್ನು ಕೈಕೊಂಡಿರಲಿಲ್ಲವೆ! ಸಂದರ್ಭವು ಬೇರೆ ಇರಬಹುದು, ಉದ್ದೇಶವು ಬೇರೆ ಇರಬಹುದು, ಫಲವು ಬೇರೆ ಇರಬಹುದು; ಆದರೂ, ಮುಖ್ಯ ಆಶಯವೂ ಮನೋಭಾವವೂ ಒಂದೇ ಸ್ವಭಾವದವು. ಪರ್ವತ ನಾರದರಿಬ್ಬರೂ ತಮ್ಮ ಅವಿವೇಕವನ್ನು ಕಂಡುಕೊಂಡು, ತಮ್ಮ ಕೆಟ್ಟ ನಡೆವಳಿಕೆಗಾಗಿ ಪಶ್ಚಾತ್ತಾಪಪಟ್ಟು, ಪ್ರಪಂಚಕ್ಕೆ ಮಾದರಿಯಾಗಿ ಪರಿಣಮಿಸಿದರು. ಕೆಸರಿನಲ್ಲಿಯೇ ಕಮಲವು ಹುಟ್ಟುವುದು! ಈ ಮಾತು ಹಾಗಿರಲಿ. ಇಷ್ಟಕ್ಕೂ ಕೆಸರಿದ್ದ ಕಡೆಯಲ್ಲೆಲ್ಲ ಕಮಲವೆಲ್ಲಿ ಹುಟ್ಟುತ್ತದೆ?

ಆದಷ್ಟು ಬೇಗ "ಡಾಗ್ಟರಿಯ" ಬಳಿಗೆ ಹೋಗಿ "ಸರ್ಟಿಫಿಕೇಟ್" ಪಡೆಯಬೇಕೆಂದು ಗೌಡರಿಬ್ಬರೂ ಎಂದಿಗಿಂತಲೂ ಹೆಚ್ಚಾಗಿ ಬೀಸಿ ಬೀಸಿ ಕಾಲನ್ನು ಹಾಕುತ್ತ ನಡೆದರು. ಬಳಸುದಾರಿಯಲ್ಲಿ ಬಂದರೂ ಬೈರಣ್ಣನೇ ಮುಂಚೆ ಆಸ್ಪತ್ರೆಗೆ ತಲಪಿದನು. ಆದರೆ "ಡಾಗ್ಟರಿ"ಯು ಇನ್ನೂ ಬಂದಿರಲಿಲ್ಲ, ಆತನು ಬರಬೇಕಾದ ವೇಳೆಗೆ ಇನ್ನೂ ಅರ್ಧಗಂಟೆಯಿದ್ದಿತು. ಆಗ ಬೈರಣ್ಣನಿಗೊಂದು ಒಳ್ಳೆಯ ಯೋಚನೆ ಹೊಳೆಯಿತು. ಒಬ್ಬ ಲಾಯರನ್ನು ಗೊತ್ತುಮಾಡಿಕೊಂಡು ಬಂದುಬಿಡೋಣವೆಂದು ಅವನು ಊರೊಳಕ್ಕೆ ಹೋದನು. ಒಂದಕ್ಕೆ ನಾಲ್ಕರಂತೆ ಬೆಳಸಿ ಅವನು ಹೇಳಿದ ವಿವಾದ ವಿಷಯಗಳನ್ನೆಲ್ಲಾ ಕೇಳಿ, ಲಾಯರು, "ಇದೇನು ಕಲಸುಮೇಲೋಗರವೋ ನಿನ್ನ ಕಥೆ! ಯಾವ ಸೆಕ್ಷನ್ನಿಗೆ ಹಾಕೋಣ? ಏನೇನೋ ಬೆರಸಿಬಿಟ್ಟಿದ್ದೀಯಲ್ಲಾ! ಎಷ್ಟೋ ಸೆಕ್ಷನ್ ಕೆಳಗೆ ಎಷ್ಟೋ ಅಪರಾಧಗಳಾಗುತ್ತೆ. ಹುಚ್ಚೆದ್ದು ಹೋಗುವ ಹಾಗೆ ಸಂಗತಿಗಳನ್ನು ಹೇಳಬೇಡ, ಸರಿಯಾಗಿ ಹೇಳು. ಹಲಸಿನ ಹಣ್ಣು ಬಿಡಿಸಿ ತೊಳೆ ತೆಗೆದಿಟ್ಟಹಾಗೆ ಹೇಳಬೇಕು. ಹೀಗೆ ಫಜೀತಿಪಡಿಸಿದರೆ ಹೇಗೆ?" ಎಂದು ಬೇಸರಪಟ್ಟು ಹೇಳಿದರು. ಅದಕ್ಕೆ ಬೈರಣ್ಣನು, "ಎಲ್ಲಾ ಸೆಕ್ಷನ್ ಕೆಳಗೆ ಎಲ್ಲಾ ಸೇರಿಸಿಬಿಡಿ. ದೇವರು ಆ ಮಗನಿಗೆ ನೀರಿನಮೇಲೆ ಸಾಗಿಸೋ ಶಿಕ್ಷೆ ಆಗಿಬಿಡಲಿ, ಫಾಸೀ ಸಜಾ ಕೊಡಿಸಿ, ಅವನಿಗೆ ನೇಣು ಹಾಕಿಸಿದ್ರೂ ನಂಗೆ ಸಂತೋಷವೇ. ನಾನು

ಮಾರಮ್ಮನಿಗೆ ಉತ್ಸವಾ ಹೊರಡಿಸ್ತೀನಿ, ನಿಮಗೂ ಇನಾಂ ಕೊಡ್ತೀನಿ" ಎಂದನು.

ಲಾಯರು—(ರೇಗಿ) "ಫೀಜು ಕೊಡ್ತೀನಿ ಅಂತ ಬೊಗಳೋ ಇವನು ನನಗೆ ಇನಾಂ ಕೊಡ್ತಾನಂತೆ! ಇನಾಂ!"

ಬೈರಣ್ಣ—"ಹಿಂಗ್ಯಾಕೆ ರೇಗೀಯೋ ನಮ್ಮಪ್ಪ! ಫೀಜಿನ ಮಾತಲ್ಲ, ನಾನು ಹೇಳಿದ್ದು, ಇನಾಂ ಮಾತು ಇದಕ್ಯಾಕಪ್ಪ ಇಷ್ಟು ಕೋಪ?"

ಲಾಯರು—"ಏಕವಚನದಲ್ಲಿ ಮಾತಾಡಬೇಡಪ್ಪೋ! ನಿನಗೆ ಮಾನ ಮರ್ಯಾದೆಯೇ ಇಲ್ಲ; ಶುದ್ಧ ಮುಟ್ಠಾಳ ಮತ್ತೆ ಇನಾಂ ಮಾತೇ ಬೊಗಳಬೇಡ, ಕೊಡುವಹಾಗಿದ್ದರೆ ಅದನ್ನೂ ಫೀಜು ಅಂತಲೇ ಬೊಗಳು ಇನಾಮಂತೆ, ಇನಾಮು!"

ಬೈರಣ್ಣ—"ಹಂಗೇ ಆಗಲಿ ನಮ್ಮಪ್ಪಾ! ಫೀಜೂ ಅಂದ್ರೇನು ಹೆಚ್ಚು, ಇನಾಮು ಅಂದ್ರೇನು ಕಡಿಮೆ? ದುಡ್ಡು ನನ್ನ ಕೈಬಿಟ್ಟು ನಿಮ್ಮ ಕೈನೇರಿದ್ಮೇಲಂದು ಹೆಸರು ಯಾವದಾದ್ರೇನು? ಅಂತು ಅವನಿಗೆ ಫಾಸೀ ಸಜಾ ಆದಾತೋ? ಹೋಗಲಿ, ನೀರಿನಮ್ಯಾಲಾದರೂ ಸಾಗ ಸಾರೋ? ಬದುಕಿರಲಿ, ಅವನು ನಾಯೋದು ಬೇಡ, ನೀರಿನಮೇಲೆ ದೀಪಾಂತರಾ ಸಾಗಿಸಿದರೆ ಸಾಕು"

ಲಾಯರು—"ಈ ನಣ್ಣ 'ತಪ್ಪಿಗೆಲ್ಲ ಫಾಸೀ ನಜಾ, ಬಂಕೋಲೆ ನಜಾ, ಅದೆಲ್ಲಾ ಇಲ್ಲ"

ಬೈರಣ್ಣ—"ಹಂಗಾದರೆ ನಾನು ಇನಾಂ—ಅಲ್ಲ ಅಲ್ಲ, ಫೀಜು, ಎರಡನೇ ಫೀಜು—ದುಡ್ಡು ಕೊಡೋಲ್ಲ ಮೊದಲ ಫೀಜು ಒಂದೇ ನಾನು ಕೊಡೋದು ಹೇಳಿ, ಎಷ್ಟು ಫೀಜು ಕೊಡಬೇಕು?"

ಬೈರಣ್ಣನು ತುಂಬ "ಚೌಕಸಿ" ಮಾಡಿ, ಲಾಯರಿಗೆ ಕೊಡುವ ಹಣವನ್ನು ಗೊತ್ತುಮಾಡಿಕೊಂಡು, ಡಾಕ್ಟರ ಸರ್ಟಿಫಿಕೇಟನ್ನು ಪಡೆಯಲು ಆತನ ಬಳಿಗೆ ಹೋದನು. ಡಾಕ್ಟರೂ ಅದೇತಾನೆ ರಂಗೇಗೌಡನಿಗೆ

ಸರ್ಟಿಫಿಕೇಟನ್ನು ಕೊಟ್ಟು ಕಳುಹಿಸಿದ್ದನು ರಂಗೇಗೌಡನಿಗೆ ಏಟುಗಳು ಹೆಚ್ಚಾಗಿ ಬಿದ್ದು ಬಾಸುಂಡೆಗಳ ಮೇಲೆ ಬಾಸುಂಡೆಗಳು ಎದ್ದಿದ್ದುವು ಬೈರಣ್ಣ ನಿಗೆ ಅಷ್ಟು ಬಾಸುಂಡೆಗಳಿರಲಿಲ್ಲ ಅವನು ವಯಸ್ಸಿನಲ್ಲಿ ರಂಗೇಗೌಡನಿ ಗಿಂತ ಚಿಕ್ಕವನು, ಅವನಿಗಿಂತಲೂ ಬಲಶಾಲಿ ಬೈರಣ್ಣನು ತನ್ನ ಹೆಸ ರನ್ನೂ ಊರನ್ನೂ ತಿಳಿಸಿದಮೇಲೆ ಡಾಕ್ಟರು, "ಈಗ ಬಂದಿದ್ದ ರಂಗೇಗೌಡ ನನ್ನು ನೀನೇ ತಾನೆ ಹೊಡೆದೋನು? ಪಾಪ! ಅವನು ವಯಸ್ಸಾದವನು; ಅವನನ್ನು ಬಹಳ ಹೊಡೆದಿದ್ದೀ; ಸುಮ್ಮನೆ ದುಡುಕಬೇಡ" ಎಂದರು

ಬೈರಣ್ಣ —"ಬುದ್ಧೀ! ಅವನು ನನ್ನ ಹೊಡೆದದು ಹಂಗೇ ಹೋಗಬೇಕೋ! ಇಲ್ಲಿ ನೋಡಿ, ಬಾಸುಂಡೆ; ಇಲ್ಲಿ ನೋಡಿ, ರಕ್ತ ಕಪ್ಪು ಕಟ್ಟಿ ಹೋಗದೆ ಮೊಳಕೈಮೇಲೆ ನೋಡಿ; ಕೋಲು ಕೋಲೇ ಎದ್ದು ನೀಲಗಟ್ಟಿ ಹೋಗವೆ ನನಗೂ ಕೊಡೀ ಬುದ್ಧಿ ಸರ್ಟಿಫ್ಪಿನ್ ಕೇಟ"

ಡಾಕ್ಟರು ಮರುಮಾತಾಡದೆ ತಮ್ಮ ಕೀರಲು ಧ್ವನಿಯಲ್ಲಿ ಹೋದ ಕಡೆಗೆ ರಾಗವನ್ನೆಳೆಯುತ್ತಾ, "ಮೂರ್ಖಸ್ಯ ನಾಸ್ತ್ಯೌಷಧಂ" ಎಂದು ಹಾಡಿಕೊಂಡು ಸರ್ಟಿಫಿಕೇಟನ್ನು ಬರೆದುಕೊಟ್ಟರು ಗದ್ದೆಯನ್ನು ಹೊಸ ದಾಗಿ ಬೆಲೆಗೆ ಪಡೆದವನು ಮೊಟ್ಟಮೊದಲನೆಯ ಸಾರಿ ತನ್ನ ಮನೆಗೆ ಬತ್ತದ ಬೆಳೆಯು ಬಂದುದನ್ನು ನೋಡಿ ನೋಡಿ ಹಿಗ್ಗುವಂತೆ ಬೈರಣ್ಣನು ಅದನ್ನು ತಿರುಗಿಸಿ ತಿರುಗಿಸಿ ನೋಡುತ್ತ, ಅಷ್ಟು ಘನವಾದ ವಸ್ತುವು ತನ್ನ ಕೈಯ ಲ್ಲಿರುವುದೂ, ತಾನು ಅದನ್ನು ಪಡೆದುದೂ ನಿಜವಿರಬಹುದೇ ಎಂದು ಯೋಚಿಸುತ್ತಿರುವನೋ ಎನ್ನುವಷ್ಟು ಸಂತೋಷದಿಂದ ಊರಿಗೆ ಹೋದನು ಮರುದಿನ ಬೆಳಗ್ಗೆ ಸೋಮನಾರ ಲಾಯರ ಮನೆಗೆ ಹೋಗಿ ಮೊಕದ್ದಮೆ ಯನ್ನು ದಾಖಲು ಮಾಡಿಸಿಬಿಡಬೇಕೆಂಬ ಉದ್ದೇಶವು ಅವನಿಗಿದ್ದುದರಿಂದ, ಅಂದಿನ ಒಂದೊಂದು ಗಂಟೆಯೂ ಒಂದೊಂದು ಯುಗದಂತೆ ಅವನ ಮನಸ್ಸಿಗೆ ತೋರುತ್ತಿದ್ದಿತು ಮಧ್ಯಾಹ್ನವೆಲ್ಲ, "ಆಕಾಶದಲ್ಲಿ ಸ್ವಾಮಿಯು ಇನ್ನೂ ಮಾಲಲಿಲ್ಲವಲ್ಲಾ! ಇವತ್ತ್ಯಾಕೋ ನಿಧಾನವಾಗವನೇ ಅಂತ ತೋರ್ತದೆ ಇವತ್ತು ಏನುಹೊತ್ತಿಗೆ ಅವನು ಕೆಳಕ್ಕಿಳಿಯೋದು?" ಎಂದು ಅವನು ಗುಣಿತ ಹಾಕುತ್ತಲೇ ಇದ್ದನು

ಮರು ದಿವಸ ಇಬ್ಬರೂ ನ್ಯಾಯಸ್ಥಾನಕ್ಕೆ ಹೋದರು ರಂಗೇಗೌಡನು ಲಾಯರನ್ನಿಡಲಿಲ್ಲ ಊರಿನವರೆಲ್ಲರೂ ಕಂಡ ವ್ಯಾಜ್ಯಕ್ಕೆ-ತಾನು ಮಾರಮ್ಮನಿಗೆ ಹರಕೆ ಮಾಡಿಕೊಂಡಿದ್ದ ವ್ಯಾಜ್ಯಕ್ಕೆ-ಲಾಯರನ್ನಿಡಲೇಕೆ ಎಂಬುದೇ ಅವನ ಅಭಿಪ್ರಾಯ ಅಲ್ಲದೆ, ತನ್ನ ಎದುರು ಪಕ್ಷದವನಲ್ಲ ಅನ್ಯಾಯವಿದ್ದುದರಿಂದ, ಅವನು ಲಾಯರನ್ನೇ ಇಡಲಿ ಲಾಗವನ್ನೇ ಹೊಡೆಯಲಿ ಅವನ ಕಡೆಗೆ ತೀರ್ಪು ದೊರೆಯುವುದಿಲ್ಲವೆಂಬುದು ರಂಗೇಗೌಡನ ನಂಬಿಕೆ ನ್ಯಾಯವು ತನ್ನ ಕಡೆಗೇ ಇರುವುದೆಂದೂ, ತನಗೆ ಲಾಯರ ಸಹಾಯವೂ ದೇವರ ಸಹಾಯವೂ ಎರಡೂ ಇರುವುವೆಂದೂ, ಆದುದರಿಂದ ತನಗೇ ಜಯವಾಗಬೇಕೆಂದೂ ಬೈರಣ್ಣನ ನಂಬಿಕೆ ಅಂತು ಅವರಿಬ್ಬರೂ ನ್ಯಾಯಸ್ಥಾನದಲ್ಲಿ ವ್ಯವಹಾರವನ್ನು ಹೂಡಿ ಮನೆಗೆ ಹಿಂದಿರುಗಿದರು

ಚೆನ್ನಮ್ಮನು ಗಂಡನ ಬರವನ್ನೇ ಎದುರು ನೋಡುತ್ತ ತಳಮಳಗೊಳ್ಳುತ್ತಿದ್ದಳು ಅಂದು ರಂಗೇಗೌಡನಿಗೆ ಎಷ್ಟು ಉಪಚಾರ ಮಾಡಿದರೂ ಚೆನ್ನಮ್ಮನ ಮನಸ್ಸಿಗೆ ತೃಪ್ತಿಯಿಲ್ಲ ಅವನ ಕಾಲಿಗೆ ಬಿಸಿನೀರೂ, ಊಟಕ್ಕೆ ತುಪ್ಪದ ಕಜ್ಜಾಯಗಳೂ ಅಣಿಯಾಗಿದ್ದುವು ಪ್ರಭವ ವಿಭವ ಸಂವತ್ಸರಗಳು ಅರವತ್ತು ವರುಷಗಳಿಗೊಮ್ಮೆ ಸರದಿಯ ಮೇಲೆ ಬಂದಂತೆ, ಹಿಂದೆಯೇ ಕಳೆದುಹೋಗಿದ್ದ ಸುಖಕಾಲವು ಮತ್ತೊಮ್ಮೆ ಹಿಂದಿರುಗಿದಂತಾಯಿತು ಇದನ್ನು ನೋಡಿ ಅವನಿಗೇ ಆಶ್ಚರ್ಯ! ಮನಸ್ಸಿನ ಚಾಪಲ್ಯವನ್ನು ತಡೆಯಲಾರದೆ, "ಇವತ್ತು ಕಜ್ಜಾಯವನ್ನೇಕೆ ಮಾಡಿದ್ದೀಯೆ?" ಎಂದು ಹೆಂಡತಿಯನ್ನು ಕೇಳಿಯೇಬಿಟ್ಟನು "ಗೌಡರು ತಿನ್ನಲೀ, ಮಕ್ಕಳು ನಗಲೀ, ನನಗೂ ಬಾಯಿ ಸೀಯಾಗಲೀ ಅಂತ" ಎಂದು ಉತ್ತರ ಬಂದಿತು ಹೆಂಡತಿ ಹಿಗ್ಗುವುದನ್ನು ಕಂಡು ಅವನು ತಾನೂ ನಲಿದನು ಕಜ್ಜಾಯವನ್ನು ಕರಿದುದಕ್ಕೆ ಕಾರಣವೇನೋ ಇಬ್ಬರಿಗೂ ಗೊತ್ತುಂಟು ಅದರ ಸಿಹಿಯು ನಾಲಗೆಗೆ ಪರಿದಷ್ಟೂ ದಂಪತಿಗಳಿಬ್ಬರಿಗೂ ನೆರೆಯ ಮನೆಯವರ ಮೇಲಣ ದ್ವೇಷವು ಹೆಚ್ಚಿತು ಇತ್ತ ಕಾಳಮ್ಮನೂ ಸಡಗರದಿಂದ ತನ್ನ ಗಂಡನಿಗೆ ಉಪಚಾರ ಮಾಡಿದಳು ಅವರು ಇನ್ನೂ ನೂತನ ದಂಪತಿಗಳಾಗಿದ್ದುದರಿಂದ, ಬೈರಣ್ಣನಿಗೆ ಅದರಲ್ಲೇನೂ ವಿಶೇಷವು ತೋರಲಿಲ್ಲ

ಅವನು ಇನ್ನೂ ನಿತ್ಯೋತ್ಸವದಲ್ಲಿದ್ದವನು. ಉಪಚಾರಗಳು ಇನ್ನೂ ಕಡಿಮೆಯಾಗಿರಲಿಲ್ಲ. ಅವು ಪಕ್ಷೋತ್ಸವದಿಂದ ಮಾಸೋತ್ಸವಕ್ಕೂ, ಮಾಸೋತ್ಸವದಿಂದ ವರ್ಷೋತ್ಸವಕ್ಕೂ ಇಳಿಯಲು ಇನ್ನೂ ಸ್ವಲ್ಪಕಾಲವಿದ್ದಿತು. ಕಾಳಮ್ಮನು—ಹೆಚ್ಚೇನನ್ನೂ ಅರಿಯದ ಸರಳ ಹೃದಯೆಯಾದ ಆ ನವವಧುವು—ತನ್ನ ಗಂಡನ ಅಸಮಾನವಾದ ಸಾಹಸವನ್ನು ಹೊಗಳುವ ಉತ್ಸಾಹದಲ್ಲಿ, "ಜಡ್ಡಿಯೋರೆ ನಮ್ಮನೆಯೋರಿಗೆ ಹೇಳವರೆ, ಅವನ್ನ ನೀರಮ್ಯಾಲೆ ಕಳಿಸಿಬಿಡ್ತೀವಿ ಅಂತ" ಎಂದು ಸುಂತಾಗಿ ಅವರಿವರಲ್ಲಿ ಹೇಳಿದ್ದಳು. ಈ ಸಂಗತಿಯನ್ನು ಗುಟ್ಟಾಗಿಡುವಂತೆ ಅವರಿಂದ ವಾಗ್ದಾನವನ್ನೂ ಪಡೆದಿದ್ದಳು; ಆದರೂ, ಆ ಮಾತುಗಳು ರಂಗೇಗೌಡನ ಮನೆಗೆ ಮುಟ್ಟದೆ ಹೋಗಲಿಲ್ಲ. ಮಂಗಳವಾರ ಸಂಜೆಯಾಗುವುದರೊಳಗಾಗಿ ಇಷ್ಟೂ ನಡೆದುಹೋಯಿತು. ಇದರಿಂದ ಅವರ ದ್ವೇಷವು ಮತ್ತಷ್ಟು ಹೆಚ್ಚಿತು.

ಈ ಮಧ್ಯದಲ್ಲಿ ಅವರ ದ್ವೇಷವು ಪ್ರಬಲವಾಗಲು ಭಾನುವಾರ ಮಧ್ಯಾಹ್ನವೇ ಮತ್ತೊಂದು ಕಾರಣವು ದೊರೆತಿತ್ತು. ಅದಕ್ಕೆ ಊರು ಯಜಮಾನನಾದ ಹಣ್ಣು ಮುದುಕ ಹನುಮಂತೇಗೌಡನೇ ಕಾರಣ. ಹನುಮಂತೇಗೌಡನು ಶನಿವಾರದ ದಿನ ಊರಿನಲ್ಲಿರಲಿಲ್ಲವಷ್ಟೆ! ಅವನು ಭಾನುವಾರ ಬೆಳಗ್ಗೆ ಊರಿಗೆ ಬಂದನು. ರಂಗೇಗೌಡನೂ-ಬೈರಣ್ಣನೂ ಇಬ್ಬರೂ ಅಂದು ನೆರೆಯೂರಿನ ನ್ಯಾಯಶಾಲೆಗೆ ಹೋಗಿದ್ದರು. ಊರಿನವರೆಲ್ಲರೂ ಹಿಂದಿನ ದಿನ ನಡೆದಿದ್ದ "ಚೋಜಿಗ"ದ ಸುದ್ದಿಯನ್ನು ವರಸೆವರಸೆಯಾಗಿ ಹನುಮಂತೇಗೌಡನಿಗೆ ಹೇಳಿದರು. ಹನುಮಂತೇಗೌಡನ ಅಧಿಕಾರವು ಹಿಂದಿದ್ದ ಯಜಮಾನ ರುಸ್ತುಂ ರಾಮೇಗೌಡನ ಅಧಿಕಾರದಹಾಗೆ ಭರದಿಂದ ನಡೆಯುತ್ತಿರಲಿಲ್ಲ. ಮದುವೆಯ ಕಾಲದಲ್ಲಿ ಮೊದಲನೆಯ ವೀಳೆಯ, ಊರಿನ ಯಜಮಾನನೆಂಬ ದೊಡ್ಡ ಹೆಸರು—ಇವೆರಡೇ ಇವನ ಪಾಲಿಗೆ ಉಳಿದಿದ್ದ ಅಧಿಕಾರಗಳು. ಆದರೂ, ಊರಿನ ಮೇಲೆ ಅವನಿಗೆ ಎಷ್ಟೋ ಪ್ರೀತಿ, ಇತರರು ಜಗಳವಾಡಿದರೆ ತನ್ನ ಮನೆಯು ಸೂರೆಯಾದಷ್ಟು ಸಂಕಟ. ಜಗಳವಾಡಿದವರಲ್ಲಿ ಪರಸ್ಪರ ಪ್ರೀತಿಯನ್ನು ಹುಟ್ಟಿಸಲು ಅವನು ಸರ್ವಪ್ರಯತ್ನವನ್ನೂ ಮಾಡದೆ ಬಿಡುತ್ತಿರಲಿಲ್ಲ.

ಹನುಮಂತೇಗೌಡನು ಎಲ್ಲವನ್ನೂ ಕೇಳಿ ಚಿನ್ನಮ್ಮನನ್ನೂ ಕಾಳಮ್ಮನನ್ನೂ ವಿಚಾರಣೆ ಮಾಡಿದನು, ಕೊನೆಗೆ ನಿಟ್ಟುಸಿರು ಬಿಟ್ಟು, "ಒಂದು ತೆಂಗಿನ ಬುರುಡೇಮ್ಯೋಲಾ ಇಷ್ಟು ವ್ಯಾಜ್ಯ! ಶಿವಶಿವಾ! ನಿನಗೇ ಪಿರೀತಿ" ಎಂದುಕೊಂಡನು ಎದುರು ಮನೆಯ ಅಂಕಣ್ಣನನ್ನು ಕರೆದು, "ಅಪ್ಪಯ್ಯಾ! ಎಲ್ಲಾ ಪಂಚಾಯತ್ರೂ ಇದ್ರೂ ಈ ಸುಲಭವ ತಕರಾರು ಫೈಸಲ್ಮಾಡದೆ ಹೋದ್ರಲ್ಲಾ! ಕರೆಯೋ ಅವರ್ನೆಲ್ಲಾ" ಎಂದನು. ಅವರೂ ಬಂದರು ತೆಂಗಿನಕಾಯಿಯು ಯಾರದೆಂಬುದು ನಿರ್ಧರವಾಗದೆ ಹೋದುದರಿಂದ ತಾವು ಏನುಹೇಳುವುದಕ್ಕೂ ಆಗಲಿಲ್ಲವೆಂದೇ ಅವರೆಲ್ಲರೂ ಹೇಳಿದರು. ಹನುಮಂತೇಗೌಡನು ಪರಿಹಾಸದ ನಗುವನ್ನು ನಕ್ಕು, ಗಿರಿಜಾ ವಿಸಾಸೆಯ ಗೆಳೆಯನನ್ನು ಕುರಿತು, "ಏನಪ್ಪೋ! ನಿನಗೆ ಇಷ್ಟು ದಡಿವಿಸಾಸೆಯ್ತೆ, ನಿನಗೂ ಇದು ಬಗೆ ಹರೀಲಿಲ್ಲವಾ! ಇಂತೇ ತೊಡಕಿನ ಸಂಗತಿಗೋಳು ಬಂದಾಗ ಸತ್ತು ಸ್ವರ್ಗದಲ್ಲಿರೋ ರುಸ್ತುಂ ರಾಮೇಗೌಡನ ಪಾದಗಳನ್ನ ನೆನೆಕೋಬೇಕು ಅವಕ್ಕೆ ಮನಸ್ನಾಗೆ ಶರಣು ಮಾಡಕೋಬೇಕು ಆಗ ಕತ್ತಲೇಲಿ ಬೆಳಕು ತೋರ್ತವೆ ಈಗ ನೋಡವ್ವಾ! ಕಾಳಮ್ಮ ಹೇಳೋದೇನು? ತಮ್ಮ ಮರದ ಕಾಯಿ ಕರಿಬೇವಿನ ಗಿಡದ ಕೊಂಬೆಮ್ಯಾಗೆ ಬಿದ್ದು, ರಂಗೇಗೌಡನ ಹಿತ್ತಿಲಿಗೆ ಬಿತ್ತೂ ಅಂತ ಚಿನ್ನಮ್ಮ ಹೇಳೋದು ಅದು ತಮ್ಮ ಮರದ ಕಾಯಿ ಅಂತ ಬೈರಣ್ಣನ ಹಿತ್ತಿಲಿನ ತೆಂಗಿನಮರ ನೋಡು! ಗಗನದಾಗೆ ಐತೆ, ದೊಡ್ಡ ಮರ ಅಲ್ಲಿಂದ ಕಾಯಿಬಿದ್ದ ರಭಸದಾಗೆ ಕರಿಬೇವಿನ ಮರದ ಕೊಂಬೆಗೆ ಗಾಯ ಆಗೇ ಇರಬೇಕು. ಆಗಿಲ್ಲದಿದ್ದರೆ ಇದು ಬೈರಣ್ಣನ ಮನೇ ಮರದಿಂದ ಬಿದ್ದಿಲ್ಲ ಅಂಕಣ್ಣ! ಕರಿಬೇವಿನ ಮರಕ್ಕೆ ಹತ್ತಿ ಆ ಅಡ್ಡಕೊಂಬೆಯ ಮೇಲುವೊಗಾ ನೋಡೋ" ಎಂದನು. ಎಲ್ಲರೂ ಅವನ ಬುದ್ಧಿವಂತಿಕೆಯನ್ನು ನೋಡಿ ಬೆರಗಾಗಿಹೋದರು. ಒಬ್ಬರು, ಇಬ್ಬರು, ಮೂವರು, ಅನೇಕರು ಅಚ್ಚರಿವಟ್ಟು ಮರವನ್ನು ಹತ್ತಿ ನೋಡಿದರು ಕೊಂಬೆಯಮೇಲೆ ಚಕ್ಕೆಯು ಜಜ್ಜಿದಂತಾಗಿ ಗುಳಿ ಬಿದ್ದು ಹೋಗಿದ್ದಿತು ತೆಂಗಿನಕಾಯಿಯು ಬೈರಣ್ಣನ ಮನೆಯದೆಂದು ನಿರ್ಧರವಾಯಿತು ಹನುಮಂತೇಗೌಡನು ಹಿಂದಿನ ದಿನ ಊರಿನಲ್ಲಿಲ್ಲದೆ

ಇದ್ದುದರಿಂದ ಈ ಹೊಡೆದಾಟವು ನಡೆಯಿತೆಂದು ಹೇಳಿ ಹೊಗಳಿ ಎಲ್ಲರೂ ಸಂತೋಷದಿಂದ ನಕ್ಕರು. ಒಬ್ಬ ಸಣ್ಣ ಹುಡುಗನು ತನಗೆ ಏನೂ ತಿಳಿಯದಿದ್ದರೂ ನಗುವವರ ಜೊತೆಗೆ ತಾನೂ ನಕ್ಕು, ಸಂತೋಷ ಭರದಲ್ಲಿ ಲಾಗ ಹಾಕಿದನು. ಅದನ್ನು ನೋಡಿ ಇತರರು ಮತ್ತೆ ಗಹಗಹಿಸಿ ನಕ್ಕರು. ಒಬ್ಬನು ಮಾತ್ರ ನಗಲಿಲ್ಲ. ಯಾರೆನ್ನುವಿರಿ? ಗಿರಿಜಾಮೀಸೆಯ ಗೆಳೆಯ ಊರಿನ ಯಜಮಾನನು. ತನ್ನನ್ನು ದಡಿಮೀಸೆಯವನೆಂದು ಮೂದಲಿಸಿದನಲ್ಲಾ ಎಂದು ಅವನಿಗೆ ಕೋಪ. ತನ್ನ ದಡಿಮೀಸೆಯನ್ನು ಹನುಮಂತೇಗೌಡನೇನೂ ಹೊರಬೇಕಾಗಿಲ್ಲದೆಯಿದ್ದರೂ, ಅವನು ತನ್ನ ವಯಸ್ಸನ್ನೂ ನೋಡದೆ ಮೂದಲಿಸಿಬಿಟ್ಟನಲ್ಲಾ ಎಂದು ಅವನಿಗೆ ದುಗುಡ. ಈ ದುಗುಡವೇ ರಂಗೇಗೌಡನ ದ್ವೇಷಕ್ಕೆ ಧೂಪಹಾಕಲು ಅಂದು ಮಧ್ಯಾಹ್ನ ಕಾರಣವಾಯಿತು. ಕೊನೆಗೆ ಗುಂಪು ಚದುರಿತು. ಕಾಳಮ್ಮನಿಗೆ ಊರು ಯಜಮಾನನ ಔದಾರ್ಯವನ್ನು ನೋಡಿ ಆಶ್ಚರ್ಯವಾಯಿತು. ತೆಂಗಿನ ಕಾಯಿಯು ತಮ್ಮ ಮರದಿಂದ ಬಿದ್ದುದೆಂದು ವ್ಯವಸ್ಥೆಯಾದ ಸಂತೋಷ ಎಂದ ಅವಳ ಉತ್ಸಾಹಕ್ಕೆ ಪಾರವೇ ಇಲ್ಲವಾಯಿತು. ಅಂದು ಅವಳು ಇನ್ನೂ ಮೊಸರನ್ನು ಕಡೆದಿರಲಿಲ್ಲ. ಅವಳು ಕೃತಜ್ಞತೆಯಿಂದ ಹನುಮಂತೇಗೌಡನ ಮನೆಗೆ ಒಂದು ಗಡಿಗೆ ಕೆನೆಮೊಸರನ್ನು ಕಳುಹಿಸಿದಳು. ಅದನ್ನು ಚನ್ನಮ್ಮನು ಕಂಡಳು. ಮಧ್ಯಾಹ್ನದ ನಾಟಕಕ್ಕೆ ಇದೇ ನಾಂದಿಯಾಯಿತು. ಮಧ್ಯಾಹ್ನದಮೇಲೆ ಬೈರಣ್ಣನೂ ರಂಗೇಗೌಡನೂ ತನ್ನ ಬಳಿಗೆ ಬರಬೇಕೆಂದು ಹನುಮಂತೇಗೌಡನು ಹೇಳಿಕಳುಹಿಸಿದನು. ಮಾರಮ್ಮನ ಗುಡಿಯ ಕೈಸಾಲೆಯೇ ಅವನ ಆಸ್ಥಾನಮಂಟಪ.

ನಮ್ಮ ನಾಡಿನ ಹಳ್ಳಿಗಳಲ್ಲಿ ಸಾಮಾನ್ಯವಾಗಿ ಮಾರಮ್ಮನ ಗುಡಿಯ ಕೈಸಾಲೆಯೇ ದೊಡ್ಡ ಮಹಲು. ರಂಗೇಗೌಡನ ಮತ್ತು ಬೈರಣ್ಣನ ಮನೆಗಳ ಹಾಲುಗಾರೆಯ ಪಡಸಾಲೆಯನ್ನು ಬಿಟ್ಟರೆ, ಮಾರಮ್ಮನ ಗುಡಿಯ ಕೈಸಾಲೆಯೇ ದೊಡ್ಡ ಮಹಲು. ಅದೇನೂ ಅಷ್ಟು ಸುಂದರವಾಗಿರಲಿಲ್ಲ. ಆದರೂ, ಊರಿನವರಿಗೆ ಅದೇ ರಾಜಯೋಗ್ಯವಾದ ಚಂದ್ರಶಾಲೆಯೆಂಬ ಭಾವನೆ. ಉಬ್ಬುಹಲ್ಲಿನವಳಾದರೂ, ಮಕ್ಕಳ ಪಾಲಿಗೆ ಅವರ ತಾಯಿಯೇ

ಉಮಾದೇವಿ ಎಂಬುದು ಗೊತ್ತೇ ಇದೆ ಕ್ರೈಸಾಲೆಯ ನೆಲವು ಸಾರಣೆಯನ್ನು ಕಂಡು ಆರು ತಿಂಗಳ ಮೇಲಾಗಿದ್ದರೂ, ಧೂಳುಮಾತ್ರ ಹೆಚ್ಚಾಗಿರಲಿಲ್ಲ ಅದಕ್ಕೆ ಎರಡು ಕಾರಣಗಳುಂಟು ಮೊದಲನೆಯದು ಗಾಳಿಯ ಹೊಡೆತ, ಎರಡನೆಯದು, ಶ್ಯಾನುಭೋಗರೇ ಆದಿಯಾಗಿ ಊರಿನ ದೊಡ್ಡರುಮಾಲಿನವರೆಲ್ಲರೂ ಒಂದಲ್ಲ ಮತ್ತೊಂದು ನೆವದಿಂದ ಹನುಮಂತೇಗೌಡನ ಈ ಓಲಗಶಾಲೆಗೆ ಪ್ರತಿದಿನವೂ ಬರುತ್ತಿದ್ದರು ಬಂದವರು ಸ್ವಲ್ಪಹೊತ್ತು ಅಲ್ಲಿ ಕುಳಿತುಕೊಳ್ಳದೆ ಮುಂದೆ ಹೋಗುವಹಾಗಿಲ್ಲ ಒಬ್ಬೊಬ್ಬರ ಬಟ್ಟೆಗೂ ಸ್ವಲ್ಪ ಸ್ವಲ್ಪ ಧೂಳು ಮೆತ್ತಿಕೊಂಡರೂ, ಒಟ್ಟಿನಲ್ಲಿ ಎಷ್ಟೋ ಧೂಳು ಹೊರಟುಹೋಗುವುದು "ಹನಿಗೂಡಿದರೆ ಹಳ್ಳ" ಎಂಬ ಹೇಳಿಕೆಯು ಈ ವಿಷಯದಲ್ಲಾದರೂ ಅನ್ವಯಿಸಬೇಡವೆ? ಹೋಗಲಿ ಕ್ರೈಸಾಲೆಗೆ ಮೊದಲು ಬೈರಣ್ಣನು ಬಂದನು. ಅವನೊಡನೆ ಇತರರು ಕೆಲವರು ಬಂದರು ರಂಗೇಗೌಡನು ಇನ್ನೂ ಬಂದಿರಲಿಲ್ಲ ಬಾಬಯ್ಯನ ಹಬ್ಬದಲ್ಲಿ ಹುಲಿಯವೇಷದ ಮನೆಗೆ ಹೋಗಿ ವೇಷವನ್ನು ಹೊರಡಿಸಿಕೊಂಡು ಬರುವ ರಸಿಕಶಿರೋಮಣಿಗಳಂತೆ ಊರಿನ ಉಳಿದ ಮುಖಂಡರು ರಂಗೇಗೌಡನು ಹೊರಡುವುದನ್ನೇ ಕಾದಿದ್ದರು ಅವರಲ್ಲಿ ನಮ್ಮ "ದಡಿಪಿಗಾಸೆಯ" ಗೆಳೆಯನೂ ಒಬ್ಬನು ಅವನ ಹೆಸರು ಧನಕೋಟಗೌಡ ಆದರೆ, ಪಾಪ! ಅವನಲ್ಲಿ ಕುರುಡು ಕವಡೆಗೂ ಅಭಾವ ಅವನು ಕಷ್ಟಜೀವಿ ಆ ಸಾನೆಯೊಂದೇ ಅವನ ಆಸ್ತಿ ಹೆಸರು ಕ್ಷೀರಸಾಗರಭಟ್ಟನೆಂದಿದ್ದರೂ ಮನೆಯಲ್ಲಿ ಮಜ್ಜಿಗೆಗೆ ಅಭಾವವಾದರೆ ಭಟ್ಟನ ತಪ್ಪೇನು? ಇಷ್ಟಕ್ಕೂ "ಧನುಸ್ಕೋಟಿ" ಗೌಡನೆಂಬ ಹೆಸರು ಅವನದು ಅದು ಮಾರ್ಪಟ್ಟು ಧನಕೋಟಿಗೌಡನೆಂಬ ರೂಪಕ್ಕಿಳಿದಿದ್ದಿತು

ತನ್ನ ಬಳಿಗೆ ಬಂದ ಬೈರಣ್ಣನಿಗೆ ಹನುಮಂತೇಗೌಡನು ವಿಧವಿಧವಾಗಿ ಉಪದೇಶ ಮಾಡಲಾರಂಭಿಸಿದನು ಹಗೆತನವನ್ನು ತಪ್ಪಿಸುವುದೇ ಅವನ ಉದ್ದೇಶ ರಂಗೇಗೌಡನು ಅಲ್ಲಿಗೆ ಬರುವ ಮೊದಲೇ ಬೈರಣ್ಣನ ದ್ವೇಷವನ್ನಿಳಿಸಿ ಅವರಿಬ್ಬರಿಗೂ ಸ್ನೇಹಮಾಡಿಸಿ, ಮಾರಮ್ಮನಿಗೆ ಮಂಗಳಾರತಿಮಾಡಿಸಿ ಕಳುಹಿಸಬೇಕೆಂದು ಅವನ ಸಂಕಲ್ಪ ಆದರೆ, ಬೈರಣ್ಣನು

ಇವಕ್ಕೆಲ್ಲ ಸುಲಭವಾಗಿ ಒಪ್ಪುವಂತಿರಲಿಲ್ಲ. ಕೊನೆಗೆ ಹನುಮಂತೇಗೌಡನು, "ಎಲಾ ಹೈದ! ನನ್ನ ಕಣ್ಣಮುಂದಿನ ಹರೆಯದ ಹುಡುಗ ನೀನು. ನಿನಗೇಕಲೇ ಈ ಹಠ! ಇದು ತರವಲ್ಲ ಕಣೋ. ಬುಡಪ್ಪ, ಈ ಹಠ ಬುಟ್ಟುಬುಡೊ, ಕಚೇರಿ ಹತ್ತಬೇಡ, ಅದರಿಂದ ದುಡ್ಡು ಕಳಕೊಂತೀಯೆ" ಎಂದು ಹೇಳಿದನು.

ಬೈರಣ್ಣ—"ಸುಮ್ಮಗಿರೋ ಯಜಮಾನಪ್ಪ! ನಿನಗೆ ಶರಣುಮಾಡ್ತೀನಿ, ಸುಮ್ಮಗಿರೋ. ಅವನ ಸುದ್ದಿ ನೆನಸಿಕೊಂಡೆ ಅಂದರೆ ನನ್ನ ಮೈಯೆಲ್ಲ ಉರೀತದೆ. ಇದರ ಮೇಲಿ ನನ್ನ ಆಸ್ತಿಯೆಲ್ಲ ಮುಟ್ಟುಗೋಲಾಗಿ ಹೋಗ್ಲಿ, ನಾನ್ಸೇರ ಬುಡೋನಲ್ಲ."

ಹನುಮಂತೇಗೌಡ—"ಅಲ್ಲಪ್ಪಾ, ಮನೆಹಾಳ! ನಿನ್ನ ಮೂಗೇ ಹೋಗ್ತೈತೆ. ಅವನಿಗ್ಯಾಕೋ ಅಪಶಕುನ ಕೋಲೀಯೆ? ಜನ ಮಾಡಾನೆ? ನಿಮ್ಮಾಟ ನೋಡಿ ನಕ್ಕನಲಾರ."

ಅಷ್ಟು ಹೊತ್ತಿಗೆ ಸರಿಯಾಗಿ ರಂಗೇಗೌಡನೂ ಅವನ ಹಿಮ್ಮೇಳದವರೂ ಅಲ್ಲಿಗೆ ಬಂದರು. ರಂಗೇಗೌಡನು ಕೋಪದಿಂದ ಅರಳಿದ್ದ ತನ್ನ ಕೆಂಗಣ್ಣುಗಳನ್ನು ತಿರುಗಿಸುತ್ತ, "ಬಯ್ಯಿ, ಬಯ್ಯಿ, ಹನುಮಂತೇಗೌಡ! ಕೆನೆಮೊಸರಿನ ಕೆಚ್ಚು ಹಂಗ ಮಾಡ್ತೈತೆ" ಎಂದನು. ನಮ್ಮ ಧನಕೋಟಿಗೌಡನೂ ಮುಂದೆ ಬಂದು, "ಅಷ್ಟು ತಾನೇ ರಂಗೇಗೌಡ! ಇನ್ನೊಬ್ಬರ ಒಡವೆ ಸಿಕ್ಕಿದರೆ ಯಾರು ತಾನೆ ಬಿಟ್ಟಾರು? ಹನುಮಂತೇಗೌಡ ಹರೆಯಕ್ಕೆ ಬಂದ ಕಣಪ್ಪೋ! ಹುಡುಗರ ಹಂಗೆ ನನ್ನ ಮೀಸೇನ ಹಾಸ್ಯ ಮಾಡ್ತಾನೆ. ನನ್ನ ಮೀಸೆ ನಾನೇ ಹೊತ್ತೀನಿ, ಇವನ್ಗೇನ್ಕಷ್ಟ?" ಎಂದನು.

ಹನುಮಂತೇಗೌಡ—"ಧನಕೋಟೀ! ಲೇ ಧನಕೋಟಿಗೌಡ! ಇದು ನಿಂಗೆ ಚಂದವಲ್ಲ. ವ್ಯಾಜ್ಯ ಮಾಡೋರ್ಗೆ ಧೂಪಹಾಕಬಾರದು. ಅದು ಪಾಪಕಣಯ್ಯೋ! ನಿನ್ನ ನನ್ನ ಮಾತಿದ್ರೆ ನನ್ನ ಮುಂದಾಡು. ನಾನು ಸರಸಕ್ಕೆ ಅಂದದ್ದೇ ವಿರಸವಾಯಿತಾ? ನನ್ನೂ ಬಯ್ಯಿ.

ಬಂಜರು ನೆಲದ ಬಿಳೀ ಗರಿಕೆ ಹುಲ್ಲಿನ ಹಂಗೂ, ಬೇಸಿಗೆ ಕಾಲದ ಹಂಗರು ಬರಲಿನ ಹಂಗೂ ಕುರುಚು ಮಾನೆ ಅಂತ ಹೇಳಿ ಮುಯ್ಯಿಗೆ ಮುಯ್ಯಿ ತೀರಿಸು ಸಮಾಧಾನ ಇರಬೇಕಪ್ಪೋ!"

ಎಲ್ಲರೂ ಘೊಳ್ಳೆಂದು ನಕ್ಕರು ಧನಕೋಟಿಗೌಡನ ಕೋಪದ ಶೃತಿಯು ಪಾತಾಳಕ್ಕಿಳಿದುಹೋಯಿತು ಅವನಿಗೂ ನಗು ಬಂದಿತು, ಆದರೆ ಮುಖವೇನೋ ಪೆಚ್ಚು ಬಿದ್ದಿತು.

ರಂಗೇಗೌಡ—"ಈ ಬೆಡಗು ಬುಡಪ್ಪಾ! ಮೊಸರಿನ ರುಚಿ ಎಂದಿನಿಂದಲೋ ಎಷ್ಟೆಷ್ಟೋ ಸಾಂ ನೆತ್ತಿಗೇರಿ ಹಿಂಗೆ ಹೇಳ್ತೀಯೆ ನಿನ್ನೆ ರಾತ್ರೆ ಕರಿಬೇಸಿನ ಮರಕ್ಕ ಏನೋ ನಡದದೆ ಕರಾಮತ್ತು ಇವತ್ತು ನಿಂಗೆ ಮೊಸರೂ ಬಂತು ನಿಂಗೆ ಸುಮಾನ ನಾನು ಮೊಸರೆಲ್ಲ ತರಾನೆ' ನನಗೇನು ಬೈರಣ್ಣನ ಹಂಗೆ ಅಪ್ಪನ ಆಸ್ತಿ ಹೆಂಡತೀ ಕಡೇ ಆಸ್ತಿ ಎರಡೂ ಬಂದೈತೇನು? ನಮ್ಮನೇಲಿ ರವಿವರ್ಮನ ಪಟಗಳವೇನು? ನಂಗೆ ಅವನಷ್ಟು ಆಸ್ತಿ ಅದೇನು' ಅವನಿಗೆ ಶಿಕ್ಷೇ ಮಾಡ್ಸೇಬಿಡ್ತೀನಿ"

ಬೈರಣ್ಣ—"ನೋಡ್ರೋ ಹನುಮಂತೇಗೌಡ! ಹೆಂಗಸರ ಮಾತು ಇವನ್ಗೇಕೆ? ಚಿತ್ರದ ಮಾತು ಇವನ್ಗೇಕೆ? ಇವನೂ ಮನೆಗೆ ಅಲಂಕಾರ ಮಾಡ್ಕೊಳ್ಳಿ, ನಾನೇನೂ ಬ್ಯಾಡ ಅಂದಿಲ್ಲ ಈಗ ಹೇಳ್ತೀನಿ ಕೇಳು ನ್ಯಾಯ ನನ್ನ ಕಡ ನನ್ನ ಕಣ್ಣಾಣೆಗೂ ಪ್ರಮಾಣವಾಗಿ ಕರಿಬೇವಿನ ಗಿಡದ ಕಡೆಗೇ ನಾನು ರಾತ್ರಿಯಿಂದ ಹೋಗಿಲ್ಲ"

ಇದನ್ನು ಕೇಳಿ ಎಲ್ಲರೂ ಲೊಚಗುಟ್ಟಿದರು. ಧನಕೋಟಿಗೌಡನೂ, "ಪಾಪ! ಬೈರಣ್ಣ ಒಳ್ಳೇ ಮನಸ" ಎಂದನು. ಇದನ್ನು ನೋಡಿ ರಂಗೇಗೌಡನಿಗೆ ತನ್ನ ಕಡೆಗಿದ್ದವನು ಹೀಗೆ ಕ್ಷಣದಲ್ಲಿ ಬದಲಾಯಿಸಿದನಲ್ಲಾ ಎಂದು ವಿಷಾದವಾಯಿತು.

ಬೈರಣ್ಣ—ಹನುಮಂತೇಗೌಡನ ಬುದ್ಧಿಗೆ ಬೆರಗಾಗಿ ನಾವು ಇವತ್ತು ಅವನಿಗೆ ಕೆನೆಮೊಸರು ಕೊಟ್ಟದ್ದುಂಟು, ಇನ್ಮೇಲೆ ದಿನಾ ಕೊಡ್ತೀವಿ.

ಇವನೇನು ಹೇಳೋದು? ನಾವೇನಾದರೂ ಹಿಂದೆ ಮೊಸರು ಕೊಟ್ಟಿದ್ದರೆ ನಾನು ಬದುಕೋದೆ ಸಾಕ್ಷಿ, ಪ್ರಮಾಣವಾಗೂ ಕೊಟ್ಟಿಲ್ಲ. ನನಗೆ ಶಿಕ್ಷೆ ಮಾಡಿಸೋಕೆ ಇವನಲ್ಲ, ಇವರ ಅಪ್ಪನ ಹಣೆಗೂ ಬರೆದಿಲ್ಲ (ರಂಗೇಗೌಡನ ತಂದೆಯು ಸತ್ತು ಎಷ್ಟೋ ವರುಷಗಳಾಗಿದ್ದುವು.) ಇವರ ಬುರುಡೇ ಬರಹ ನಾನು ಕಂಡಿಲ್ಲವಾ? ನಮ್ಮ ಲಾಯರ ಗುಮಾಸ್ತರು ಹೇಳವರೆ ಈಗ ನೂರುವರುಷದ ಹಿಂದಿನ ಪುಸ್ತಕಗಳಿಲ್ಲ ನನಗೇ ಅನುಕೂಲವಾಗವೇ ಅಂತ ಹೊನದು, ಅಣ್ಣ! ಈ ವರುಸ ಅಚ್ಚಾದ್ದೂ ತರಸ್ತಾರಂತೆ ಆಗಲೇ ದುಡ್ಡು ಕೊಟ್ಟು ಬಂದಿನ್ನಿ, ನಾಳೆ ಬೀಳ್ತದೆ ರಂಜಕದ ಮದ್ದು ಮುಂದೆ, ಎಲ್ಲಾನೂ ಕೊಡವಿ ಮೇಜು ಬಡಿದು ಲಾಯರು ವಾದಿಸ್ತಾರೆ ಇವನು, ಹಾರ್ಹೋಗಬೇಡವಾ! ಈ ಕುಳ್ಳ, ರಂಗೇಗೌಡ ಭೂಪತಿ ನನ್ನ ಕೆಣಕ್ತಾನೆ, ನನ್ನ, ಶಿಡ್ಲುಮರೀನ!"

ಹನುಮಂತೇಗೌಡ—"ಕೋಪ ಹತ್ತಿದ್ರೇ ಕಣ್ಣೇ ಸರಿಯಾಗಿ ಕಾಣಿಸೋದಿಲ್ಲ ನಾನು ಲಂಚ ರುಷುವತ್ತಿಗೆ ಕೈಯೊಡ್ಡಿದೋನಲ್ಲ, ನಾನು ಕಂಡದಂಥ ಮನಸ ನಿಮ್ಮಪ್ಪ, ಅವರಪ್ಪ, ಇಬ್ಬರೂ ಅಣ್ಣ ತಮ್ಮಂದಿರೇ ಅನ್ನೋಹಂಗಿದ್ದರು ನೀವು ಚಿಕ್ಕಗಳ ಹಂಗೆ ಕಚ್ಚಾಡ್ತೀರಿ ನಮ್ಮೂರು ಯಜಮಾನ ರುಸ್ತುಂ ರಾಮೇಗೌಡ ಹೋದಮ್ಯಾಲೆ ಈ ಊರಿನ ಕಳಸವೇ ಹೋಯ್ತು ನಮ್ಮೂರಿಗೆ ಉಪ್ಪು, ಬಂಕಿಕಡ್ಡೀ, ಶೀಮೇಎಣ್ಣೆ—ಈ ಮೂರು ಸಾಮಾನು ಹೊರಗಿನಿಂದ ತರ್ತಾ ಇದ್ದೂ, ಉಳಿದದ್ದೆಲ್ಲಾ ಇಲ್ಲೇ ಹೊಂಚಿಕೋತಾ ಇದ್ದೊ ಈಗ ಹೆಸರುಕಾಳೂ ಹೊರಗಿನಿಂದ ಬರಬೇಕು ಈ ಊರಾಗೆ ಬೆಳದಿಂಗಳಾಗೆ ಎಲ್ಲಿ ನೋಡು 'ಜರ್ ಜರ ಜರ ಜರ್' ಅಂತ ರಾಟೇಲಿ ನೂಲೋ ಹೆಂಗಸರು ಗಂಡಸರು! ದೇವತೆಗಳಂಗೆ ಬಿಳೀ ಬಟ್ಟೆ ಉಟ್ಕೊಂಡು ನೂಲ್ತಾ ಇರೋರು, ಹೊಲೆ ಮಗ್ಗದಾಗೆ ಬಟ್ಟೆ, ಊರಮಗ್ಗದಾಗೆ ಬಟ್ಟೆ, ಅಗಸನ ಮಡಿ ಈ ಊರಾಗೆ ಈಗ ಅಗಸನೂ ಇಲ್ಲ, ರಾಟೆಯೂ ಇಲ್ಲ, ಮಗ್ಗ ಮೊದಲೇ ಇಲ್ಲ,

ಸತ್ಯದ ಕಾಲವ್ರೂ ಆಗ್ಲೇ ಹೋಯ್ತು. ಪತ್ರಾ ಬರೆದು ಸಾಲ ತರೋದು ಅಂದ್ರೇನು? ಸಾಲ ಕೊಡೋನೂ, ಸಾಲಾ ಮಾಡೋನೂ ಇಬ್ರೂ ಗುಟ್ಟಾಗೆ ಒಳಗೇರ ಅರಳೀಮರದ ತಾವ ಹೋಗಿ ಹಣದ ಲೆಕ್ಕಾಚಾರ ಮಾಡ್ಕೊಳ್ಳೋರು. ದಗಾ ಹಾಕ್ದೋನು ಒಬ್ಬನೂ ಕಾಣೆ, ಪಾಪ ಬರ್ತದೆ ಅಂತ ಹೆದರೋರು ಜನ. ಹಿಂದೇಲೂ ವ್ಯಾಜ್ಯಗಳು ನಡೆಯೋವು, ಆದರೆ, ಜನ ಬೇಗ ರಾಜಿ ಆಗ್ತಾ ಇದ್ದರು, ಊರ ಯಜಮಾನ ಅಂದ್ರೆ ಎಲ್ಲಾ ನಡುಗೋರು, ಅವನು ಹೇಳಿದ ಹಂಗೆ ಕೇಳೋರು. ಊರೆಲ್ಲಾ ಹಿಡೀಲಿ ಹಿಡಕೊಂಡು ತಂದೇ ಹಂಗೆ ಎಲ್ಲರ್ನೂ ಅವನು ಕಾಪಾಡ್ತಾ ಇದ್ದ. ಈಗ ಏನದೆ ಇಲ್ಲಿ? ಎಲ್ಲಾ ಕಟ್ಟು ಕಿತ್ತ ಪಂಚು, ಬೆಳಗೆದ್ದರೆ ವ್ಯಾಜ್ಯ, ಹೊಡೆದಾಟ, ತಲೆಗೆ ರೇಶ್ಮೆ ವಸ್ತ್ರ, ಒರೀ ರುಮಾಲು ಸುತ್ತಿಬಿಟ್ರೆ ದೊಡ್ಡೋರಾದಾರಾ ಜನರು? ಹಿಂಗೆ ಪರಳೀ ಜಳ್ಳು ಬಿದ್ದಿರುವಾಗ ಹೊಡೆದಾಟಕ್ಕೆ ಕಮ್ಮಾ ಆಳೋಣ? ಆಗಲಿ, ಇದೂ ಆಗಲಿ. ನೋಡ್ರಪ್ಪಾ! ಕೆಳಗೆ ಭೂಮಿತಾಯಿ ಮ್ಯಾಲೆ ಧರ್ಮತಾಯಿ. ಮನುಸರು ನಾವು ಕೆಟ್ಟು, ಕಾಲ ಕೆಡ್ತು ಅಂತ ಬಯ್ಯೋಕ್ಕೆ ಗೋಳು ಬಂದದೆ. ಧರ್ಮದೇವತೆ ಒಪ್ಪೋ ಹಂಗೆ ನಡದ್ರೆ ಚಂದ. ಮಾತಿನ್ಹಂಗೆ ಮನಸಿರಬೇಕು. ಮೊಂಬರಾಟಾ ಆಡಿದರೆ ಧರ್ಮರಾಯ ಒಪ್ತಾನಾ? ಅವನಕಡೆ ಚಿತ್ರಗುಪ್ತರು ನಮ್ಮ ತೋಳುಗಳಾಗೆ ಅವರೆ, ಅವರ ಕಣ್ಗೆ ಮಣ್ಣೆರಚಾಕಾದಾತಾ? ಇದರ ಮ್ಯಾಲೆ ನಿಮ್ಮ ನಿಮ್ಮ ಮನಸು. ನೀವು ಓದು ಬಂದೋರು, ಇದೆಲ್ಲಾ ಮೂಢಭಕ್ತಿ ಅಂತೀರಿ. ಹಿಂಗೆ ಓದು ಬರೆಪೇ ಇದ್ರೂ ನಮ್ಮಪ್ಪನ ಕಾಲದಾಗೆ ಸುಳ್ಳು ಹೇಳೋ ಗೌಡ ಈ ಊರೊಳಗೆ ಒಬ್ಬನೂ ಇರಲಿಲ್ಲ. ಈಗ ಯಾವ ಜಾತೀಲಿ ನೋಡ್ಕೋ, ಸುಳ್ಳು ಹೇಳೋರು ಎಷ್ಟು ಜನಾ ಅಂತ. ತಾಯಿ ಕಲಿಸಿದ ಬುದ್ಧಿ ಅವರೇನು ಮಾಡಾರು? ಈಗ ನೋಡಯ್ಯಾ! ನಮ್ಮೂರು ಶಾನುಭೋಗರ ಹೆಂಡತಿ ಮೂರು ಬೆಟ್ಟಂಚಿನ ಸೀರೆ ಉಡ್ತಾಳೆ, ಮಹಾತಾಯಿ ಅವರು! ಅವರ ಮಕ್ಕಳೆಲ್ಲಾ ಹುಡುಗರಾಗಿದ್ದಾಗ ತಮ್ಮ ಮನೇ ಮಕ್ಕಳಿಗೆ

ತಿಂಡಿ ಕೊಟ್ಟು ನೆರೆಹೊರೆ ಹುಡುಗರು ಅಲ್ಲಿದ್ದರೆ ಅವರಿಗೂ ಕೊಟ್ಟು 'ನೀವೂ ತಿನ್ನಿ' ಅನ್ನೋರು ಈಗ ಅವರ ಮಗಳು ಮೊಳ ಮೊಳ ಅಂಚಿನ ಬಣ್ಣದ ಸೀರೆ ಉಡ್ತಾಳೆ, ಬೆಂಗಳೂರು ಪಟ್ಟಣದಾಗೆ ಅವಳ ಗಂಡಂಗೆ ಕೆಲಸ ಈಗ ಬಂದವಳೆ ಇಲ್ಲಿಗೆ ನಾನು ಆಡಿಸಿದ ಹುಡುಗಿ ಅವಳು ಅವಳು ಇವತ್ತು ತನ್ನ ಹುಡುಗಂಗೆ ಊರಿಂದ ತಂದಿದ್ದ ಬಣ್ಣ ಬಣ್ಣದ ಬಗೆ ಬಗೆ ತಿಂಡಿ ಕೊಟ್ಟು ಹೇಳ್ತಾಳೆ 'ಯಾರಿಗೂ ತೋರಿಸಬ್ಯಾಡ ಯಾರಾರು ಕೇಳಿದರೆ ಜೇಬಿನಲ್ಲಿ ಮುಚ್ಚಿಕೋ, ನನ್ನ ಹತ್ತಿರ ಏನೂ ಇಲ್ಲ' ಅನ್ನು ಅಂತ ಮಕ್ಕಳಿಗೆ ನಾವೇ ಸುಳ್ಳು ಹೇಳೋ ದಾರಾ ಕಲಿಸಿ, ಆಮ್ಯಾಲೆ ತಲೇ ಚಚ್ಚಿಕೊಂಡರೆ ತಪ್ಪು ಯಾರದೋ ಹೇಳಿ ಅವರ ಅಕ್ಕ ಹಂಗಿಲ್ಲ ಅವಳೂ ದೊಡ್ಡೋರಮನೆ ನೀರವಳ ನೀವು ಜಗಳ ಬುಟ್ಟುಬಿಡಿ ಕಾಯಿ ಬೈರಣ್ಣನ ಮರದ್ದು ತಿನನೇ ಬಂದು ಕೂಲಾ ಎದೆಗೆ ಆನಿಸಿ ಕೇಳಿದರೂ ನಾನು ಹಿಂಗೇ ಹೇಳೋನೆ ಒಂದು ತೆಂಗಿನಕಾಯಿ ಬುರುಡೆಗಳ್ಲಿನೇ ಇಷ್ಟು ವ್ಯಾಜ್ಯ ನಮ್ಮ ತೋಟಕ್ಕೆ ಹೋಗಿ ಇಬ್ಬರೂ ಇಪ್ಪತ್ತು ಕಾಯಿ ಕೆಡವಿಕೊಳ್ಳಿ ನಾನು ಬೇಡ ಅಂದರೆ ನನಗೆ ಬವಲು ಹೆಸರಿಡಿ ವ್ಯಾಜ್ಯಮಾತ್ರ ಕಾಯಬೇಡಿ ಊರಿಗೆ ದೊಡ್ಡ ಒಕ್ಕಲಾಗಿ ಎಲ್ಲರಿಗೂ ನೆರಳು ಕೊಡೋ ನಮ್ಮೂರ ಮುಂದಿನ ನೇರಳೆಮರದ ಹಾಗಿರೋದು ಚಂದ ಅದರ ಹಣ್ಣು ಎಷ್ಟು ಜನ ತಿಂತಾರ? ಎಷ್ಟು ಪಕ್ಷಿಗಳು ತಿಂತವೆ! ನಾನು ನಿಮ್ಮಿಬ್ಬರಿಗೂ ರಾಜೀಮಾಡಿದ ಪುಣ್ಯಾ ಕಟ್ಕೊಂಡು ಇವತ್ತು ರಸಬಾಳೆ ಹಣ್ಣಿನ ರಸಾಯನ ಮಾಡ್ಸಿ ದೇವರಿಗೆ ಮಂಗಳಾರತಿ ಮಾಡಿಸಬೇಕೂ ಅಂತ ಇದ್ದೀನಿ ಪೂಜಾರಪ್ಪ! ಮಾಡೋ ಮಂಗಳಾರತಿ "

ಪೂಜಾರಿಯು ಗಣಗಣನೆ ಗಂಟೆಯನ್ನು ಬಾರಿಸುತ್ತ ಮಂಗಳಾರತಿಯನ್ನು ಮಾಡಿದನು ಹನುಮಂತೇಗೌಡನು ಮಾಗಿದ ರಸಬಾಳೆಯ ಹಣ್ಣಿನ ಗೊನೆಯನ್ನು ತಾನು ಹೋಗಿದ್ದ ಊರಿನಿಂದ ತಂದಿದ್ದನು ಮೊದಲು ಅವನಿಗಿದ್ದ ಉದ್ದೇಶವು ತಾನೊಬ್ಬನೇ ಆ ಹಣ್ಣುಗಳನ್ನು ತಿಂದು

ಮುಗಿಸಬೇಕೆಂಬುದು. ಏಕೆಂದರೆ, ಗೊನೆಯ ಹಣ್ಣುಗಳಲ್ಲಿ ಯಾವುದೋ ಒಂದರಲ್ಲಿ ಅಮೃತವಿರುತ್ತದೆಂದು ಹಳ್ಳಿಯವರಲ್ಲಿ ನಂಬಿಕೆ. ಆ ಅಮೃತವು ತನ್ನ ಹೊಟ್ಟೆಗೇ ಸೇರಲೆಂಬುದು ಅವನ ಹಾರೈಕೆ. ಆದುದರಿಂದ, ಒಂದು ಹಣ್ಣನ್ನೂ ಯಾರಿಗೂ ಕೊಡದೆ ಎಲ್ಲವನ್ನೂ ತಾನೇ ತಿನ್ನಬೇಕೆಂದಿದ್ದ ಅವನ ಸಂಕಲ್ಪವು ಅವನ ಉದಾರ ಮನಸ್ಸಿನ ವೆನೆಯಿಂದ ಹೀಗೆ ತಿರುಗಿತು. ಆದರೆ, ರಂಗೇಗೌಡನ ಕೋಪವು ಹೆಚ್ಚಲು ಅದೇ ಕಾರಣವಾಯಿತು. ಆ ಹಳ್ಳಿಯಲ್ಲಿ ರಸಬಾಳೆಯ ಗಿಡಗಳಿದ್ದುದು ಬೈರಣ್ಣನ ತೋಟದಲ್ಲಿ ಮಾತ್ರವೇ. ರಂಗೇಗೌಡನೂ ನಿಜಸ್ಥಿತಿಯನ್ನರಿಯದೆ ವಿಚಾರವಿಲ್ಲದ ಊಹೆಗಾರಂಭಿಸಿದನು. ತನ್ನನ್ನು ಬಹಳವಾಗಿ ಹೊಡೆದಿದ್ದ ಬೈರಣ್ಣನೇ ನ್ಯಾಯಸ್ಥಾನದ ಶಿಕ್ಷೆಯ ಭಯದಿಂದ ಈ ಆಟವನ್ನಾಡಿರಬೇಕೆಂದು ಕ್ಷಣಮಾತ್ರದಲ್ಲಿ ಸಿದ್ಧಾಂತ ಮಾಡಿದನು. ಆ ವೇಳೆಗೆ ತನ್ನ ಕೈಗೆ ಬಂದಿದ್ದ ರಸಾಯನದ ದೊನ್ನೆಯನ್ನು, ಅದು ದೇವರ ಪ್ರಸಾದವೆಂಬುದನ್ನೂ ಮರೆತು, ನೆಲಕ್ಕೆ ಹಾಕಿ ತುಳಿದು, "ಬೈರಣ್ಣನ ತೋಟದ ಬಾಳೆಹಣ್ಣಿನಿಂದ ಆಟಾ ಕಟ್ಟಿದರೆ, ನನಗೇನೂ ಮಂಕು ಹಿಡಿದಿಲ್ಲ. ನನ್ನನ್ನು ನಂಗೂ ಕಿವಿ ಮೂಡ್ಡದಾಗೆ ಚುಚ್ಚುವಳೆ" ಎಂದುಕೊಂಡು ದಪದಪನೆ ಹೊರಟೇ ಹೋದನು. ಅವನು ಮಾಡಿದುದು ತಪ್ಪೆಂಬುದನ್ನು ಎಲ್ಲರೂ ಒಪ್ಪಿಕೊಂಡರು. ಬೈರಣ್ಣನ ತೋಟದ ಪಕ್ಕದ ತೋಟದವನು, ರಸಬಾಳೆಯ ಗೊನೆಯು ಯಾವುದೂ ಬೈರಣ್ಣನ ತೋಟದಲ್ಲಿರಲಿಲ್ಲವೆಂದು ಆಣೆಯಿಟ್ಟು ಹೇಳಿದನು. ಆ ಬಳಿಕ ಹನುಮಂತೇಗೌಡನು ನಿಜಸ್ಥಿತಿಯನ್ನು ವಿವರಿಸಿದನು. ಅವನ ಹೃದಯವು ಎಷ್ಟು ಉದಾರಭಾವವುಳ್ಳದೆಂಬುವನ್ನು ತಿಳಿದು ರಸಾಯನದ ಸವಿಯು ನಾಲಿಗೆಗಿಳಿದಮೇಲಂತು ಎಲ್ಲರಿಗೂ ರಂಗೇಗೌಡನ ಅಪರಾಧವು ಕ್ಷಮಿಸಲಾಗದುದೆಂದು ಕಂಡುಬಂದಿತು. ಬೈರಣ್ಣನಿಗೂ ದ್ವೇಷ ಹೆಚ್ಚಿತು. ಹನುಮಂತೇಗೌಡನ ವಿವೇಕದ ಮಾತುಗಳನ್ನು ಕೇಳಿದುದರಿಂದ ಅವನ ಮನಸ್ಸಿನಲ್ಲಿ ಉಂಟಾಗಿದ್ದ ಸತ್ಪರಿಣಾಮವು, ರಂಗೇಗೌಡನ ದುಡುಕು ಮಾತಿನಿಂದ ಎಲ್ಲಿಗೋ ಹಾರಿಹೋಯಿತು. ಅವನು ಹನುಮಂತೇಗೌಡನೊಡನೆ, "ನೋಡಿದೋ, ಯಜಮಾನಪ್ಪ! ನೀನು ರಾಮದೇವರನ್ನ

ಮಾಡೋಕೆ ಹೋಗಿ ಹನುಮಂತರಾಯನ್ನ ಮಾಡಿದ ಹಂಗಾಯ್ತು. ಇವನಿಗೇ ಇಷ್ಟು ಜೂರತ್ತಾದರೆ, ನಾನೇನು ಬಳೆತೊಟ್ಟಿದ್ದೀನೇನು? ಆಗಲಿ, ಒಂದು ಕೈ ನೋಡೇ ಬಿಡ್ತೀನಿ" ಎಂದನು.

ಆದರೂ ಹನುಮಂತೇಗೌಡನು ಅದಕ್ಕೆ ಒಪ್ಪದೆ, ಬಹುವಾಗಿ ಸಮಾಧಾನ ಹೇಳಿದನು. ಅದರ ಸಾರಾಂಶವು ಇಷ್ಟು: "ಹೀಗೆ ಹಠಮಾಡುವುದು ಅವಿವೇಕ. ದೊಡ್ಡವರು ದುರಾಗ್ರಹ ಮಾಡಿದರೂ ಚಿಕ್ಕವರು ತಾಳ್ಮೆಯನ್ನು ತೋರಿಸಿದರೆ ಮತ್ತೂ ವಿಶೇಷ. ಹೊಡೆದಾಟವೇನೋ ಆಯಿತು. ನಡೆಯುವ ಕಾಲು ಎಡವಿದರೆ ಹೋಗಲಿ, ಕಾಣದೆ ಕಲ್ಲನ್ನು ಇಬ್ಬರೂ ಎಡವಿದಮೇಲೆ ಒಬ್ಬರ ಕಾಲನ್ನು ಮತ್ತೊಬ್ಬರು ಜಜ್ಜಬಾರದು" ಇತ್ಯಾದಿ ಮುದುಕನ ಬೋಧನೆಯನ್ನು ಕೇಳಿ ಧನಕೋಟಿಗೌಡನು, "ಹನುಮಂತೇಗೌಡ! ನಿನ್ನ ತಾಳ್ಮೆ ನೋಡಿದರೆ, ನಿನಗೆ ಅಡ್ಡಬಿದ್ದು ಶರಣುಮಾಡಿದರೂ ಕಡಿಮೆ ಅಂತ ನನಗೆ ತೋರ್ತದೆ" ಎಂದನು. ಬೈರಣ್ಣನ ಮನಸ್ಸಿನಲ್ಲಿಯೂ ಸ್ವಲ್ಪ ಶಾಂತತೆ ಹುಟ್ಟಿತು. ಬೆಳಗಾದರೆ ಸೋಮವಾರ ಗಂಡನ ವೈರಾಗ್ಯವನ್ನು ಕಂಡು ಕಾಳಮ್ಮನು, "ಅರುಳು ಮರುಳು ಮುದುಕ, ಆಗಲೋ ಈಗಲೋ ಕಣ್ಣು ಮುಚ್ಚಿಕೊಳ್ಳುವ ಬೆಳ್ಳಿ, ತಲೆಯ ಒಡೆಯನ ಮಾತು ಕೇಳಬೇಡಿ. ಈಗ ಮೊಕದ್ದಮೆ ನಡಿಸದೆ ಬಿಟ್ಟರೆ, ಊರನಾಗೆಲ್ಲಾ ಅವಮಾನ, ಸರೀಕರಲ್ಲಿ ತಲೆ ತಗ್ಗು" ಎಂದು ಮುಂತಾಗಿ ವಾದಿಸಿದಳು. ಈ ಮಾತುಗಳೂ ಹನುಮಂತೇಗೌಡನ ಕಿವಿಗೆ ಮುಟ್ಟಿದುವು. ಊರಿನವರೆಲ್ಲರೂ ಅವನ ಹಿತಚಿಂತಕರಾಗಿರುವಾಗ ಅವನಿಗೇನು ಯೋಚನೆ? ಬೈರಣ್ಣನ ವೈರಾಗ್ಯಕ್ಕೂ ಕಾಳಮ್ಮನ ಸವಿನುಡಿಯ ಪ್ರೋತ್ಸಾಹಕ್ಕೂ ಎಷ್ಟೋ ಹೊತ್ತು ಪರಸ್ಪರ ಯುದ್ಧವು ನಡೆಯಿತು. ಕೊನೆಗೆ ರಂಗೇಗೌಡನು ಸುಮ್ಮನಿದ್ದರೆ ತಾನೂ ಸುಮ್ಮನಿರುವುದೆಂದೂ, ಅವನೇನಾದರೂ ಮೊದಲು ನ್ಯಾಯಸ್ಥಾನದಲ್ಲಿ ವ್ಯಾಜ್ಯವನ್ನು ಹೂಡಿದರೆ ತಾನೂ ಒಡನೆಯೇ ವ್ಯಾಜ್ಯವನ್ನು ಹೂಡುವುದೆಂದೂ ಅವನು ನಿರ್ಧರ ಮಾಡಿಕೊಂಡನು. ಸೋಮವಾರ ರಂಗೇಗೌಡನು ವ್ಯವಹಾರವನ್ನು ಆರಂಭಿಸಿಯೇಬಿಟ್ಟನು.

ಬೈರಣ್ಣನು ಹಿಂದೆ ಬೀಳಲಿಲ್ಲ. ಅವನೂ ಮೊಕದ್ದಮೆಯನ್ನು ಹೂಡಿದನು. ಈ ವಿಷಯವನ್ನು ನಾನು ಹಿಂದೆಯೇ ಅರಿಕೆ ಮಾಡಿದ್ದೇನೆ

ಮಂಗಳವಾರ ಮತ್ತೊಂದು ಹಗರಣವು ನಡೆಯಿತು ರಂಗೇಗೌಡನ ಮನೆಯವರಿಗೆ ಕರಿಬೇವಿನ ಸೊಪ್ಪು ಬೇಕಾಯಿತು ಕರಿಬೇವಿನ ಗಿಡ ಇದ್ದುದು ಬೈರಣ್ಣನ ಹಿತ್ತಿಲಿನಲ್ಲಿ ರಂಗೇಗೌಡನ ಮಗ ತಿಮ್ಮನು ಗೋಡೆಯಮೇಲೆ ಹತ್ತಿ ಗಳುವನ್ನು ಹಿಡಿದುಕೊಂಡು ಕರಿಬೇವಿನ ಸೊಪ್ಪಿನ ಸಣ್ಣ ಪುಟ್ಟ ಕೊನೆಗಳು ಕೆಳಗೆ ಬೀಳುವಂತೆ ಬಡಿಯ ತೊಡಗಿದನು ಆ ವೇಳೆಗೆ ಸರಿಯಾಗಿ (ಅಲ್ಲಿಯೇ ಹತ್ತಿರದಲ್ಲಿದ್ದ) ಅಮಟೆಯ ಗಿಡದಮೇಲೆ ಒಂದು ಕಾಗೆಯು "ಕಾ ಕಾ" ಎಂದು ಕೂಗಿತು ತನ್ನ ಮಗ ತಿಮ್ಮನು ಕರೀಬೇವಿನ ಸೊಪ್ಪನ್ನು ಕೀಳಲು ಶಕುನವು ಸರಿಯಾಗಿಲ್ಲವೆಂದು ಭಾವಿಸಿ ಕೊಂಡು, ಕೆಳಗೆ ಸೊಪ್ಪನ್ನು ಆರಿಸಿಕೊಳ್ಳುತ್ತಿದ್ದ ಚೆನ್ನಮ್ಮನು ಅವನನ್ನು ಕೆಳಕ್ಕಿಳಿದು ಬರುವಂತೆ ಹೇಳಿದಳು ಅವನು ಬರಲಿಲ್ಲ "ಹಾಳುಮನೇ ಮರ ಅದರಮೇಲೆ ಕಾಗೆ ಕೂಗ್ತೈತೆ, ಮನೆಯೋರ ಹಂಗೇ ಅದೂ ಮಾಡ್ತದೆ, ಸಾಕು, ಬಾರೋ ಮಗ, ಇದಕ್ಕೂ ಬಡುಕೊಂಡಾರು, ಇನ್ನು ಬಡಿಬೇಡ" ಎಂದಳು ಆ ವೇಳೆಗೆ ಸರಿಯಾಗಿ ಕಾಳಮ್ಮನು ತಮ್ಮ ಮನೆಯ ಹಿತ್ತಿಲಿಗೆ ಬಂದಳು ಹುಡುಗನು ಅದನ್ನು ನೋಡಲಿಲ್ಲ ಅಲ್ಲದೆ, ತಾನು ಕೊಂಬೆಯನ್ನು ಬಡಿಯುವ ರಭಸದಲ್ಲಿ "ಬುಟ್ಟೇನಾ ನಾನು? ವಜೀರ, ಬಡಿದುಹಾಕಿಬಿಡ್ತೊಂದೆ" ಎಂದುಕೊಂಡು ತನ್ನ ಕೆಲಸವನ್ನು ತಾನು ಮಾಡುತ್ತ ಇದ್ದನು ಆ ದಿನ ಬೈರಣ್ಣನು ಎತ್ತಿನ ವ್ಯಾಪಾರಕ್ಕೆ ಒಂದು ಹಳ್ಳಿಗೆ ಹೋಗಿದ್ದನು ಈ ಸಮಯದಲ್ಲಿ, ವ್ಯಾಜ್ಯವನ್ನು ತೆಗೆಯ ಬೇಕೆಂದು ಸನ್ನಾಹವು ನಡೆಯುತ್ತಿದೆಯೆಂದೂ, ತಾನು ಬಂದರೆ ಬಡಿದು ಹಾಕಿಬಿಡುವುದಾಗಿ ತಿಮ್ಮನು ತಮ್ಮ ತಾಯಿಗೆ ಹೇಳುತ್ತಿದ್ದನೆಂದೂ ಕಾಳ ಮ್ಮನು ತಪ್ಪಾಗಿ ತಿಳಿದುಕೊಂಡಳು ಎಷ್ಟಾದರೂ ಚಿಕ್ಕ ವಯಸ್ಸಿನವಳು ಪರೆಬಿಟ್ಟ ಹಾವು ಹೆಡೆಯನ್ನು ಬಿಚ್ಚಿ, ತುಳಿದವರ ಮೇಲೆ ಹಾರಿ ಬೀಳುವಂತೆ, "ವಜೀರನಂತೆ, ವಜೀರ! ಬಡಿದು ಹಾಕ್ತಾನಂತೆ! ಇವನ ಬಾಯಿ ಸೇದಿ ಹೋಗ! ಲೇ ಹಂದೀಮರಿ! ಇನ್ನೇನಾದ್ರೂ ಮರನನ್ನು ಬಡಿದ್ಯೋ

ನೋಡ್ಕೋ ನೀನು ಹುಟ್ಟಲಿಲ್ಲಾ ಅನ್ನಿಸಿ ಬಿಡ್ತೀನಿ!" ಎಂದು ಗರ್ಜಿಸಿದಳು. ಗೋಡೆಯ ಆಚೆಗೆ ಇದ್ದ ಚೆನ್ನಮ್ಮನು ತನ್ನನ್ನು ಹಂದಿಯೆಂದವಳ ತಾಯಿಯನ್ನು ನಾಯಿಯೆಂದು ಬೈದು, ಮರವನ್ನು ಮತ್ತಷ್ಟು ಹೆಚ್ಚಾಗಿ ಬಡಿಯುವಂತೆ ಹುಡುಗನನ್ನು ಪ್ರೋತ್ಸಾಹಿಸಿದಳು. ಅವನೂ ಮಾತೃವಾಕ್ಯವನ್ನು ಚೆನ್ನಾಗಿ ಪರಿಪಾಲಿಸಬೇಕೆಂಬ ಉದ್ದೇಶದಿಂದ, ಗೋಡೆಯ ಮೇಲೆ ಜಗ್ಗಿ ಜಗ್ಗಿ ಕುಣಿದು ರಭಸದಿಂದ ಕೊಂಬೆಯನ್ನು ಬಡಿಯತೊಡಗಿದನು. ರೋಷದಿಂದ ಉರಿಯುತ್ತಿದ್ದ ಚೆನ್ನಮ್ಮನಿಗೆ ತನ್ನ ಮಗನು, ಮಳೆಯಿಂದ ನೆನೆದ ಗೋಡೆಯಮೇಲೆ ಹೀಗೆ ಮಾಡಿದುದು ಸರಿಯಲ್ಲವೆಂಬುದು ತೋರಲಿಲ್ಲ, ಅವಳ ಅವಿವೇಕವನ್ನು ಕ್ಷಮಿಸಿ ಸುಮ್ಮನಿರಲು ಅಚೇತನ ವಸ್ತುವಾದ ಗೋಡೆಗೆ ತಕ್ಕಷ್ಟು ವಿವೇಚನೆಯೂ ಇರಲಿಲ್ಲ. ಅಂತು, ಗೋಡೆಯು ಕುಸಿದುಬಿದ್ದಿತು. ತಿಮ್ಮನು ಕೆಳಗೆಬಿದ್ದನು. ಗೋಡೆಯು ಬಹಳ ಎತ್ತರವಾಗಿಲ್ಲದ ಕಾರಣ, ಅವನ ಮುಂಡಿಯೂ ಕೈಗಳೂ ತರಿದು ಹೋಗಿ, ರಕ್ತವು ಬರುವುದರಲ್ಲಿ ಮಾತ್ರವೇ ಈ ನಾಟಕವು ಕೊನೆಗಂಡಿತು. ತಿಮ್ಮನು ನೋವಿನಿಂದ ನರಳುತ್ತ, ತನ್ನ ಕೋಪದ ಕಾಲುವೆಯನ್ನು ಕಾಳಮ್ಮನಮೇಲೆ ತಿರುಗಿಸಿದನು. ಒಂದು ಹೆಂಟೆಯನ್ನು ಅವಳ ಕಡೆಗೆ ಎಸೆದನು. ಅದು ಧೊಪ್ಪನೆ ಅವಳ ಬೆನ್ನಿಗೆ ತಗಲಿತು. ಕೆಳಕ್ಕೆ ಬಿದ್ದು ಒಡೆದುಹೋದ ಅದೇ ಹೆಂಟೆಯ ಒಂದು ಚೂರನ್ನೇ ಅವಳೂ ತಿಮ್ಮನ ಮೇಲೆ ಬಲವಾಗಿ ಬೀರಿ ಮನೆಯೊಳಕ್ಕೆ ಓಡಿಹೋಗಿ ಬಾಗಿಲನ್ನು ಹಾಕಿಕೊಂಡು ಒಳಗಿನಿಂದ ಬೈಯಲಾರಂಭಿಸಿದಳು. ಆಳುಗಳೂ ಮನೆಯಲ್ಲಿರಲಿಲ್ಲ. ತಿಮ್ಮನು ಗಳಗಳನೆ ಅಳುತ್ತಿದ್ದನು. ಚೆನ್ನಮ್ಮನೂ ಯಥಾಶಕ್ತಿಯಾಗಿ ಸಹಸ್ರನಾಮ ಪಾರಾಯಣಕ್ಕೆ ಪ್ರಾರಂಭಿಸಿದಳು.

ನೆರೆಹೊರೆಯ ಮನೆಗಳಲ್ಲಿ ಗಂಡಸರು ಯಾರೂ ಇರಲಿಲ್ಲ. ಹೆಂಗಸರೆಲ್ಲರೂ "ಮುಸಿ ಮುಸಿ" ನಗುತ್ತ ಇದ್ದರು. ಕೆಲವರಿಗಂತು, ಮತ್ತಷ್ಟು ಹೊಡೆದಾಟವಾಗದೆ ಇಷ್ಟರಲ್ಲಿಯೇ ಕಲಹವು ಕೊನೆಗಂಡಿತಲ್ಲಾ ಎಂಬ ತಳಮಳ, ಅವರಿಗೆ ಕೆಲಸವೇ ತೋರದು, ವಾಜ್ಯವು ಬಲವಾಗಲೆಂಬುದೇ ಅವರ ಹಾರೈಕೆ. ಊರಿಗೇನೋ ಶನಿಕಾಟವು ಬಂದು, ದೊಡ್ಡವರ ಮನೆಯಿಂದಲೇ

ಪ್ರಾರಂಭವಾಗುವಂತಿದೆಯೆಂದು ಒಬ್ಬ ಮುದುಕಿಯು ಗೊಣಗುತ್ತಿದ್ದಳು. ಅವಳ ಸೊಸೆಯು ಸೆರಗಿನಿಂದ ಬಾಯಿಯನ್ನು ಮುಚ್ಚಿಕೊಂಡು ಮುಗುಳುನಗೆ ನಗುತ್ತ "ನೀವಾರಾ ಹೋಗಿ ಸಮಾಧಾನ ಹೇಳಿ" ಎಂದು ಹೇಳಿದುದಕ್ಕೆ ಮುದುಕಿಯು "ಅಂಥಾ ಹನುಮಂತೇಗೌಡ ಹಾಕಿದ ಕಲ್ಲುಕಟ್ಟಿಗೇ ನಿಲ್ಲದ ನೀರು, ನನ್ನ ಮರಳು ಕಟ್ಟಿಗೆ ನಿಂತಾತಾ ಹೇಳು? ಕಾಯಲಿ, ಕಾಯಲಿ, ಜಗಳಾನ ಒಲೆ ಉರಿದುರಿದು ಕೊನೆಗೆ ತಣ್ಣಗಾಗಲೇಬೇಕು" ಎಂದು ಬುದ್ಧಿವಂತಿಕೆಯ ಮಾತನ್ನಾಡಿ ಸುಮ್ಮನಾದಳು

ಅಂದು ನಡೆದ ವಿದ್ಯಮಾನಗಳೆಲ್ಲ ಊಹೆ ಉತ್ಪ್ರೇಕ್ಷೆಗಳಿಂದ ಕೂಡಿ ರಂಗೇಗೌಡನ ಕಿವಿಗೆ ಬಿದ್ದುವು ಕಾಲಕ್ರಮದಲ್ಲಿ ಕಾಳಮ್ಮನೂ ಇಲ್ಲದ್ದು ಸಲ್ಲದ್ದನ್ನು ಸೇರಿಸಿ ಎಲ್ಲವನ್ನೂ ಬೈರಣ್ಣನ ಕಿವಿಯಲ್ಲಿ ಊದಿದಳು "ಥೀ, ಥೀ" ಎಂದರೆ ಮುಂದೆ ನುಗ್ಗಿ ಕಾಳಗವಾಡುವ ಟಗರುಗಳಂತೆ ಇಬ್ಬರು ಗೌಡರೂ ನ್ಯಾಯಸ್ಥಾನದಲ್ಲಿ ಮತ್ತೆರಡು ಮೊಕದ್ದಮೆಗಳನ್ನು ಹೂಡಿದರು; ಇಬ್ಬರೂ ತಮತಮಗೆ ಅನುಕೂಲ ತೋರಿದಹಾಗೆ ನಿಜವಾದ ವಿದ್ಯಮಾನಗಳಿಗೆ ತಕ್ಕಷ್ಟು ಸುಳ್ಳನ್ನು ಬೆರಸಿ ತಾವು ರಚಿಸಿದ ಕಥೆಯ ಅಂದಚಂದಗಳನ್ನು ನೋಡಿ ತಾವೇ ಹಿಗ್ಗುತ್ತಿದ್ದರು ಇದನ್ನು ಯಾರು ಕೇಳಿದರೂ, ಫಲಿತಾಂಶವು ಮೊಕದ್ದಮೆಯು ಸುಳ್ಳೆನ್ನುವ ಹಾಗಾಯಿತು ಆದರೆ ಆ ಸಂಗತಿಯು ಇವರಿಬ್ಬರಿಗೆ ಮಾತ್ರ ತಿಳಿಯಲಿಲ್ಲ ದ್ವೇಷದ ಕತ್ತಿಯನ್ನು ಮಸೆದು ಮಸೆದು ಹರಿತಮಾಡುತ್ತಿದ್ದ ಅವರಿಬ್ಬರೂ ಈ ಚಿಲ್ಲರೆಯ ವಿಷಯಗಳಿಗೆ ಗಮನಕೊಡುವ ಹಾಗೆಯೂ ಇರಲಿಲ್ಲ ಹನುಮಂತೇಗೌಡನು ಮತ್ತೆ ಮತ್ತೆ ಸಮಾಧಾನ ಹೇಳಿದುದೂ ವ್ಯರ್ಥವಾಯಿತು ಕಡಿದಾದ ಬೆಟ್ಟದ ಮೇಲಿನಿಂದ ಕೆಳಕ್ಕುರುಳುತ್ತಿರುವ ಕಲ್ಲುಬಂಡೆಯನ್ನು ಹಿಡಿದು ನಿಲ್ಲಿಸುವವರಾರು?

ಅಲ್ಲಿಂದ ಮುಂದೆ ಮೊಕದ್ದಮೆಯ ಮೇಲೆ ಮೊಕದ್ದಮೆಗಳಿಗೆ ಪ್ರಾರಂಭವಾಯಿತು ಒಂದುದಿನ ರಂಗೇಗೌಡನ ಮನೆಯಲ್ಲಿ ಕರುವು ಗೂಟವನ್ನು ಕಿತ್ತುಕೊಂಡು ಹಸುವಿನ ಹಾಲನ್ನು ಕುಡಿಯಿತು ಅಂದು ಚೆನ್ನಮ್ಮನು ಮರೆತು ಮನೆಯ ಬಾಗಿಲಿಗೆ ಒಳಗಿನ ಚಿಲಕವನ್ನು ಹಾಕಿರಲಿಲ್ಲ ಸರಿ,

ನೆರೆಮನೆಯವರೇ ಇದಕ್ಕೆ ಕಾರಣವೆಂದು ನ್ಯಾಯಸ್ಥಾನಕ್ಕೆ ಅರ್ಜಿ ಹೊರ ಟಿತು. ಒಂದು ದಿನ ರಾತ್ರಿ ಬೈರಣ್ಣನ ಮನೆಯವರು ಹೊರಬಾಗಿಲನ್ನು ತೆರೆದುಬಿಟ್ಟು ಹಿತ್ತಿಲುಕಡೆಯಿದ್ದಾಗ ಒಂದು ನಾಯಿ ಒಳಗೆ ನುಗ್ಗಿ ಅನ್ನದ ತಪ್ಪಲೆಯನ್ನು ಎಳೆಯುತ್ತ ಹೊರಡಲು, ಅಲ್ಲಿಮರುಪೇರಾಗಿ ಜೋಡಿಸಿಟ್ಟಿದ್ದ ಕೆಲವು ಪಾತ್ರೆಗಳು ಉರುಳಿಕೊಂಡುವು ಇದನ್ನು ಕಂಡು ಭಯಪಟ್ಟ ನಾಯಿಯು ಧಟ್ಟನೆ ಹಾರಿ ಹಾಲಿನ ಪಾತ್ರೆಯನ್ನುರುಳಿಸಿ ಓಡಿಹೋಯಿತು ಕಾಳಮ್ಮನು ಪಾತ್ರೆಗಳು ಬಿದ್ದ ಸದ್ದನ್ನು ಕೇಳಿ ಹಿತ್ತಿಲಿನಿಂದ ಓಡಿಬಂದಳು, ತಾನು ಹೊಸದಾಗಿ ತಂದಿದ್ದ ಎತ್ತಿಗೆ ಜೋಳದ ಕಡ್ಡಿಯನ್ನು ತಿನ್ನಿಸುತ್ತಿದ್ದ ಬೈರಣ್ಣನೂ ಒಳಕ್ಕೆ ಬಂದನು ಇದು ನೆರೆಯವರ ಕೃತ್ಯವೆಂದೇ ಅವ ರಿಬ್ಬರೂ ನಿರ್ಧರಿಸಿದರು ಅದರಮೇಲೆ ಬೈರಣ್ಣನು ರಂಗೇಗೌಡನಮೇಲೆ ಮತ್ತೊಂದು ಮೊಕದ್ದಮೆಯನ್ನು ಹಾಕಿದನು ಇಬ್ಬರಿಗೂ ದ್ವೇಷವು ಉಕ್ಕಿ ಹರಿಯುವ ಹಾಗಾಯಿತು ಹುರುಳಿಲ್ಲದ ಆ ಮೊಕದ್ದಮೆಗಳೆಲ್ಲವೂ ಕಾಲಕ್ರಮದಲ್ಲಿ ವಜಾ ಮಾಡಲ್ಪಟ್ಟುವು ಇದರಿಂದ ಅವರ ದ್ವೇಷಗಳು ಮತ್ತಷ್ಟು ಹೆಚ್ಚಿದುವು ಇವೆಲ್ಲದರ ಫಲಿತಾಂಶವಾಗಿ ವ್ಯವಸಾಯವು ಹಿಂದೆ ಬಿದ್ದು, ಇಬ್ಬರಿಗೂ ನ್ಯಾಯಸ್ಥಾನದ ವೆಚ್ಚವು ಹೆಚ್ಚುತ್ತ ಹೋಯಿತು ಹೀಗೆ ನಷ್ಟಪಡುತ್ತಿದ್ದರೂ ಅವರಲ್ಲಿ ಯಾರೂ ಸೋಲಲಿಲ್ಲ ಜೋಳಿಗೆ ಯನ್ನು ಹಿಡಿಯುವ ಗತಿಯು ಬರುವವರೆಗೂ, ಆಮೇಲೆಯೂ ಛಲವನ್ನು ಬಿಡುವುದಿಲ್ಲವೆಂದು ಪ್ರತಿಜ್ಞೆ ಮಾಡುತ್ತಿರುವವರು ಸುಮ್ಮನಾಗುವ ಬಗೆ ಹೇಗೆ? ಊರಿನಲ್ಲಿ ಜಾತ್ರೆಯ ಕಾಲವು ಸಮಿಪಿಸಿತು ಇಬ್ಬರ ಮನೆಗೂ ನೆಂಟರಿಷ್ಟರು ಬಂದು ನೆರೆದರು ಇದರಿಂದ ಅವರಿಬ್ಬರಿಗೂ ಪರಸ್ಪರ ದ್ವೇಷಸಾಧನೆಯಲ್ಲ ಒತ್ತಾಸೆ ದೊರೆತು, ತೂಕಡಿಸುತ್ತಿದ್ದವನಿಗೆ ಹಾಸಿಗೆ ಹಾಸಿಕೊಟ್ಟಂತಾಯಿತು ಇನ್ನು ಕೇಳಬೇಕಾದುದೇನು? ಜನಗಳು ಹೆಚ್ಚಿ ದಷ್ಟೂ ಜಗಳವೂ ಹೆಚ್ಚಿತು

ಒಂದು ಮೊಕದ್ದಮೆಯಲ್ಲಿ ರಂಗೇಗೌಡನಿಗೆ ಜುಲ್ಮಾನೆಯಾದರೆ ಮತ್ತೊಂದರಲ್ಲಿ ಬೈರಣ್ಣನಿಗೆ ಜುಲ್ಮಾನೆ; ಅವನ ಒಂದು ಮೊಕದ್ದಮೆ ಕೆಟ್ಟುಹೋದರೆ, ಇವನ ಮತ್ತೊಂದು ಮೊಕದ್ದಮೆ ಕೆಟ್ಟುಹೋಗುವುದು

ಇತ್ಯಾದಿ. ಇಬ್ಬರ ಮನೆಗೆ ಬಂದಿದ್ದ ಬಂಧುಗಳೂ ತಮ್ಮ ಊರಿಗೆ ಹೊರಡಲೇ ಒಲ್ಲರು ಅವರಿಗೆ "ಮನೆಗಿಂತ ಮರವೇ ಭದ್ರ"ವೆನಿಸಿತು

ಈ ಮಧ್ಯದಲ್ಲಿ ಬೈರಣ್ಣನ ಮೇಲೆ ಒಂದು ದೊಡ್ಡ ಆಪಾದನೆ ಬಂದಿತು ರಂಗೇಗೌಡನ ಮನೆಗೆ ಬಂದಿದ್ದ ಬಂಧುಗಳಲ್ಲಿ ಒಬ್ಬ ಹುಡುಗನು ರಾತ್ರಿ ಮಲಗಿದ್ದವನು ಬೆಳಗ್ಗೆ ಕಾಣಲಿಲ್ಲ ಹಿಂದಿನ ರಾತ್ರಿ ಚೆನ್ನಮ್ಮನೇ ಬೀದಿಯ ಬಾಗಿಲನ್ನು ಮುಚ್ಚಿ ಚಿಲಕ ಹಾಕಿ, ಅದನ್ನು ಮುಟ್ಟಿ ಮುಟ್ಟಿ ನೋಡಿ ಸಂಶಯವನ್ನು ಹೋಗಲಾಡಿಸಿಕೊಂಡು, ಮಲಗಿದ್ದಳು ಆದರೂ ಬೀದಿಯ ಬಾಗಿಲು ತೆರೆದಿದೆ; ಕರುಗಳಲ್ಲಿ ಒಂದೂ ಕೊಟ್ಟಿಗೆಯಲ್ಲಿಲ್ಲ ಕೆಲವು ಬೀದಿಯಲ್ಲಿವೆ, ಕೆಲವು ಓಡಿಹೋಗಿವೆ ಹುಡುಗನಂತು ಎಲ್ಲಿ ಹುಡುಕಿದರೂ ಸಿಕ್ಕಲಿಲ್ಲ ಅವನ ತಾಯಿಯು ಗೋಳಾಡುವುದಕ್ಕೆ ಮೊದಲಿಟ್ಟಳು ಬೈರಣ್ಣನೇ ಈ ಮನೆಮುರುಕುತನವನ್ನು ಮಾಡಿರಬೇಕೆಂಬುದು ನಿರ್ಧಾರವಾಯಿತು ರಾಗರಾಗವಾಗಿ ಬೈಗುಳು ಪ್ರಾರಂಭವಾಯಿತು ಅಷ್ಟರಲ್ಲಿ ಪಟೇಲನೂ ಬಂದು ಹುಡುಗನ ಚಹರೆಯನ್ನು ಕಾಣಿಸಿ ಪೋಲೀಸಿನವರಿಗೆ ವರದಿಯನ್ನು ಬರೆದನು ಅವರೂ ಬಂದು ವಿಚಾರಣೆ ಮಾಡಿದರು ಹುಡುಗನ ತಂದೆಯು ಮೂರು ಹರದಾರಿಗಳಿಗಾಚೆಯಿದ್ದ ಒಂದು ಹಳ್ಳಿಯಲ್ಲಿದ್ದನು ಪೋಲೀಸಿನವರು ಹುಡುಗನ ತಂದೆಯ ಹೆಸರನ್ನು ಕೇಳಿದಾಗ, ಹುಡುಗನು ತಪ್ಪಿಸಿಕೊಂಡು ಹೋದುದನ್ನು ತಂದೆಗೆ ತಿಳಿಸಬೇಕಾಗಿದ್ದಿತೆಂಬುದು ರಂಗೇಗೌಡನಿಗೆ ಹೊಳೆಯಿತು ಸಾಯಂಕಾಲವು ಸಮೀಪಿಸುತ್ತಿದ್ದುದರಿಂದ ಮರುದಿನ ಬೆಳಗ್ಗೆ ಆಳನ್ನು ಅಲ್ಲಿಗೆ ಕಳುಹಿಸಬೇಕೆಂದು ಅವನು ನಿರ್ಧರಿಸಿದನು ಪೋಲೀಸಿನವರು ಎಲ್ಲರನ್ನೂ ವಿಚಾರಣೆ ಮಾಡಿದರು

ಯಾರು ಎಷ್ಟು ಸಾರಿ ತಲೆಕೆರೆದುಕೊಂಡು ಏನೇನು ಯೋಚನೆ ಮಾಡಿದರೂ ಹುಡುಗನ ವಿಚಾರವು ಬಗೆಹರಿಯಲಿಲ್ಲ ಬೆಳಗಿನಿಂದಲೂ ಊರಿನವರೆಲ್ಲರೂ ಹುಡುಗನನ್ನು ಹುಡುಕಿ ಹುಡುಕಿ ಸಾಕಾಗಿದ್ದರು ಇನ್ನು ಎಷ್ಟು ಹುಡುಕಿದರೂ ಅವನು ಸಿಕ್ಕುವ ಸಂಭವವು ಅವರಿಗೆ ತೋರಲಿಲ್ಲ. ರಂಗೇಗೌಡನೇನೋ ತನಗೆ ಬೈರಣ್ಣನ ಮೇಲೆ ಸಂಶಯವೆಂದು ತಿಳಿಸಿ

ದನು ಅಲ್ಲದೆ ತಮ್ಮಿಬ್ಬರಿಗೂ ಬಹು ಕಾಲದಿಂದಲೂ ದ್ವೇಷವೆಂದೂ, ಆದ ಕಾರಣ ಈ ಮನೆಹಾಳು ಕೆಲಸವನ್ನು ಅವನೇ ಮಾಡಿರಬೇಕೆಂದೂ, ಒಂದುವೇಳೆ ಹುಡುಗನನ್ನು ಅವನು ಕೊಂದಿದ್ದರೂ ಕೊಂದಿರಬಹುದೆಂದೂ ಅವನು ಪೋಲೀಸಿನವರಿಗೆ ತಿಳಿಸಿದನು ಈ ಅನುಮಾನಕ್ಕೆ ಸರಿಯಾಗಿ ಬೈರಣ್ಣನು ಅಂದು ಬೆಳಗಿನಿಂದಲೂ ಊರಲ್ಲಿರಲಿಲ್ಲ

ಚಿನ್ನಮ್ಮನು, "ಬುದ್ಧೀ! ಆ ಹುಡುಗ ಮುದ್ದಾದ ಹುಡುಗ ಈಗ ತಿಂಗಳ ಕೆಳಗೆ ಮೊನ್ನೆ ತಾನೇ, ಸುಲಿಯಾಳದ ಸೀಮೆಯಿಂದ ಒಬ್ಬ ಗೋಸಾಯಿ ಬಂದಿದ್ದ ಬೈರಣ್ಣ ಅವನಿಗೆ ಅಡಿಗೆ ಸಾಮಾನು ಕೊಟ್ಟ; ಅವನತಾವ ಬೈರಣ್ಣ ಎಲ್ಲೋ ಪಿಶಾಚೀನ ವಶಮಾಡಿಕೊಂಡವನೆ ಇಲ್ದೇ ಇದ್ದರೆ ನಿನ್ನೇ ರಾತ್ರೆ ಅವನು ಮಾರಮ್ಮನನ್ನ ಅಷ್ಟು ಧೈರ್ಯವಾಗಿ ಹೊಡೀತಾ ಇದ್ದನೇ? ಅಂತು, ಆ ಪಿಶಾಚೀ ಸಹಾಯದಿಂದ ಚಿಲ್ಕಾ ತೆಗಿಸಿ ಹುಡುಗನ್ನ ಬೈರಣ್ಣನೇ ಹೊತ್ತುಕೊಂಡು ಹೋಗಿದ್ದಾನೆ ಅದಕ್ಕೇ ಅವನು ಬೆಳಗಿನಿಂದ ಊರಲ್ಲಿಲ್ಲ ಅವನ್ನ ಕರೆಸಿ ನೇಣು ಹಾಕಿಸಿ ಬಿಡಬೇಕು ಬುದ್ಧೀ" ಎಂದು ಹೇಳಿದಳು.

ಇದನ್ನು ಕೇಳಿ ಪೋಲೀಸಿನವರಿಗೂ ನಗು ಬಂದಿತು ಮಾರಮ್ಮನನ್ನು ಹೊಡೆದುದರ ಅರ್ಥವೇನೆಂದು ಪೋಲೀಸು ಅಧಿಕಾರಿಯು ಕೇಳಿದನು ರಂಗೇಗೌಡನ ಹೆಂಡತಿಯು ಅದನ್ನು ಒಂದು ಗಂಟೆಯ ಕಾಲ ವಿಸ್ತರಿಸಿ ಹೇಳಿದಳು ಅದು ನಮಗೂ ತಿಳಿಯಬೇಕಾದದ್ದೇ; ಏಕೆಂದರೆ, ಅದರಿಂದ ರಂಗೇಗೌಡನ ಮಾನವು ಹೋಗದೆ ಇದ್ದಿದ್ದರೆ, ಅವನಿಗೆ ಬೈರಣ್ಣನ ಮೇಲೆ ದ್ವೇಷವು ಈಗಿನಷ್ಟು ಹೆಚ್ಚುತ್ತಿರಲಿಲ್ಲ ಆದಕಾರಣ, ಅದನ್ನು ಸಂಕ್ಷೇಪವಾಗಿ ತಿಳಿಸುತ್ತೇನೆ —

ಆ ಊರಿಗೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಪ್ಲೇಗು ರೋಗವು ಕಾಣಿಸಿಕೊಂಡಿದ್ದಿತು ತಮ್ಮ ಊರಿಗೂ ಅದೆಲ್ಲಿ ಬರುವುದೋ ಎಂದು ಅಲ್ಲಿಯವರೆಲ್ಲರಿಗೂ ಶಂಕೆಯುಂಟಾಯಿತು ಹಳ್ಳಿಯವರು ಇಂತಹ ಸಂದರ್ಭಗಳಲ್ಲಿ ಮಾರಮ್ಮನಿಗೆ ಪೂಜೆಮಾಡಿ ಆಕೆಯು ಕುಶಲ ಹೇಳುವಂತೆ ಕೇಳುವು

ದುಂಟು ವಿಗ್ರಹದ ಮೇಲಿರುವ ಹೂಗಳು ಬಲಗಡೆಗೆ ಬಿದ್ದರೆ ಊರು ಕ್ಷೇಮವಾಗಿದ್ದು ಪ್ಲೇಗು ಬಾರದೆ ಇರುವುದೆಂದೂ, ಎಡಗಡೆಗೆ ಬಿದ್ದರೆ ಪ್ಲೇಗು ಬರುವುದು ನಿಶ್ಚಯವೆಂದೂ ಅವರು ನಿರ್ಧರಿಸುವುದುಂಟು, ಕೆಲವು ಕಡೆ ಮಾರಮ್ಮನೇ ಇತರರ "ಮೈದುಂಬಿ" (ಆವೇಶ ಬಂದು) ಮಾತನಾಡುವುದೂ ಉಂಟು ಅನೇಕ ಸಂದರ್ಭಗಳಲ್ಲಿ ಇದು ಬರಿಯ ಮೋಸ ಆದರೆ, ಒಟ್ಟಿನಲ್ಲಿ ಇದು ನಿಜವೋ ಸುಳ್ಳೋ ಎಂದು ನನ್ನನ್ನು ಕೇಳಬೇಡಿ ಅದನ್ನು ನಂಬುವುದೂ ಬಿಡುವುದೂ ನಿಮ್ಮ ನಿಮ್ಮ ಇಷ್ಟ ತಮ್ಮ ಊರಿಗೆ ಪ್ಲೇಗು ಬರವುದಿಲ್ಲವೋ ಎಂಬುದಾಗಿ ಆ ರಾತ್ರಿ ಊರಿನವರೆಲ್ಲರೂ ಮಾರಮ್ಮನನ್ನು "ಕುಶಲ" ಕೇಳಿ ಅಡ್ಡಬಿದ್ದರು ದೇವಿಯು ಏನು ಸೂಚಿಸುವಳೋ ಎಂದು ಪೂಜಾರಿಗೆ ಎಲ್ಲರಿಗಿಂತಲೂ ಹೆಚ್ಚಿನ ತವಕ; ಏಕೆಂದರೆ, ಅವನ ಮನೆಯ ಕಲಗಚ್ಚಿನ ಬಾನೆಯಲ್ಲಿ ಅಂದು ಬೆಳಗ್ಗೆ ಒಂದು ಸತ್ತ ಇಲಿ ತೇಲುತ್ತಿದ್ದಿತು ಆದರೆ ಅವನು ಅದನ್ನು ಯಾರಿಗೂ ಹೇಳಲಿಲ್ಲ, ಇಲಿಯನ್ನು ತೆಗೆದು ಬಿಸಾಡಿ ಸುಮ್ಮನೆ ಇದ್ದನು ಊರನ್ನು ಬಿಡಬೇಕಾಗಿ ಬಂದರೆ ಗುಡಿಸಲು ಹಾಕಿಕೊಳ್ಳಲು ಅವನಿಗೆ ಅನುಕೂಲವಿರಲಿಲ್ಲ ಆದುದರಿಂದ ಅದು ಪ್ಲೇಗಿನ ಇಲಿಯಲ್ಲವೇ ಅಲ್ಲವೆಂದು ಅವನು ಸಿದ್ಧಾಂತಮಾಡಿಬಿಟ್ಟಿದ್ದನು ಆದರೂ ಮನಸ್ಸಿನಲ್ಲಿ ಕಳವಳ, ಏನೋ ಚಪಲ ಪ್ರತಿಮೆಯ ಯಾವ ಕಡೆಗೆ ಹೂಗಳು ಬೀಳುವುವೋ ಎಂದು ಎಲ್ಲರೂ ಆತುರದಿಂದ ಎದುರುನೋಡುತ್ತಿದ್ದರು ಇದ್ದಿದ್ದ ಹಾಗೆ, "ಹುಃ ಹುಃ" ಎಂದು, ಚಳಿ ಬಂದವರು ನಡುಗಿದಂತೆ, ಕುದುರೆಯ ಮರಿಯು ಕೆನೆದಂತೆ, ಶಬ್ದವಾಯಿತು ಎಲ್ಲರೂ ಕಕ್ಕಾಬಿಕ್ಕಿಯಾಗಿ ನೋಡಿದರು ರಂಗೇಗೌಡನು ತಲೆದೂಗುತ್ತ ಹೂಂಕಾರಮಾಡುತ್ತಿದ್ದನು, ಮಾರಮ್ಮನು ಮೈದುಂಬಿದಳೆಂದು ಎಲ್ಲರಿಗೂ ನಡಗರ ಬೈರಣ್ಣನಿಗೆ ಮಾತ್ರ ಮಾರಮ್ಮನೂ ಪಕ್ಷಪಾತಿಯೆಂದೇ ತೋರಿತು ಮಾರಮ್ಮನು ತನ್ನ ಮೇಲೆ ಏಕೆ ಆವೇಶ ಬರಕೂಡದಾಗಿದ್ದಿತೆಂಬುದು ಅವನ ಸಂಶಯ ಪೂಜಾರಿಯು ನಡಗರದಿಂದ ಓಡಾಡುತ್ತ, ಮಾರಮ್ಮನಿಗೆ—ರಂಗೇಗೌಡನ ರೂಪದಲ್ಲಿ ಘುಡುಘುಡಿಸುತ್ತಿದ್ದ ಮಾರಮ್ಮನಿಗೆ—ಮಂಗಳಾರತಿಯನ್ನು ಮಾಡಿದನು ದೇವರ ವಿಗ್ರಹದ

ಬಳಿಯಲ್ಲಿ ಪೂಜೆಗಿಟ್ಟಿದ್ದ ಕೋರಡೆಯನ್ನು ರಂಗೇಗೌಡ-ಮಾರಮ್ಮನಿಗೆ ಭಕ್ತಿಯಿಂದೊಪ್ಪಿಸಿ, "ತೆಗೆದುಕೊಳ್ಳವ್ವಾ! ಕೋರಡೆಯನ್ನೊಪ್ಪಿಸಿಕೊಳ್ಳವ್ವಾ! ನಿನ್ನ ಆಯುಧ ನಿನ್ನ ಕೈಯಲ್ಲಿಟ್ಟುಕೋ ನಮ್ಮವ್ವಾ!" ಎಂದು ಹೇಳುತ್ತ, ಅರೆಬಗ್ಗು ಬಾಗಿ ಪ್ರದಕ್ಷಿಣೆಮಾಡಿ ಅಡ್ಡಬಿದ್ದನು. ರಂಗೇಗೌಡ-ಮಾರಮ್ಮನು ಕೋರಡೆಯನ್ನು ಬೀಸಿ, ಪೂಜಾರಿಯ ಬೆನ್ನಿನ ಮೇಲೆ ಒಂದು ಏಟನ್ನು ಕೊಟ್ಟು, "ಮಂಡೆಬೋಳರ ಊರು ಇದು. ನಾ ಹಸಿದು ಬಂದರೆ ಕೈಗೆ ಕೋರಡೆ ಕೊಟ್ಟೇಯಾ ಮೂಢ! ಬಾ, ನುಂಗಿಬಿಡುವೆ ನಿನ್ನ" ಎಂದು ಗರ್ಜಿಸಿದಳು. ಬಯಲಾಟದಲ್ಲಿ ಹಿಂದೆ ರಂಗೇಗೌಡನು ವೇಷ ಹಾಕುತ್ತಿದ್ದವನು. ಇದು ಹಾಗಿರಲಿ. ದೇವರ ಮಹಿಮೆಯನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಏಕೆಂದರೆ, ಆ ಊರಿನವರು ಕೆಲವರು ತಿರುಪತಿಗೆ ಹೋಗಿ ಮುಡಿಯನ್ನು ಕೊಟ್ಟು ಹಿಂದಿರುಗಿದ್ದರು. 'ಮಾರಮ್ಮನು ಅರಿಯದ ಕೋಡಂಗಿಯುಂಟೇ'' ಎಂಬ ಗಾದೆಯು ನಿಜವೆಂಬುದಕ್ಕೆ ರಂಗೇಗೌಡ-ಮಾರಮ್ಮನ, "ಮಂಡೆಬೋಳರ ಊರು" ಎಂಬುದಕ್ಕಿಂತಲೂ ಹೆಚ್ಚಿನ ದೃಷ್ಟಾಂತವೇ ಇಲ್ಲವೆಂದು ಅವರೆಲ್ಲರೂ ಅಭಿಮಾನದಿಂದ ಹಿಗ್ಗಿದರು. ಊರ ಯಜಮಾನ ಹನುಮಂತೇಗೌಡನಂತು ಮಾರಮ್ಮನು ತನ್ನನ್ನು ಮಾತ್ರವೇ ಉದ್ದೇಶಿಸಿ ಹಾಗೆ ಹೇಳಿರಬೇಕೆಂದು, ಕೂದಲು ಮುಕ್ಕಾಲುಪಾಲು ಉದುರಿಹೋಗಿದ್ದ ತನ್ನ ಪಟ್ಟೆತಲೆಯನ್ನು ಸವರಿಕೊಂಡು ಆನಂದಪಟ್ಟನು. ಪೂಜಾರಿಯು "ಬೆನ್ನಿನಮೇಲೆ ಹೊಡೆದೆ, ಹಸಿದಿದ್ರೆ ಬೋನ ಕೊಡ್ತೀನಿ. ಹೊಟ್ಟೆಯಮೇಲೆ ಹೊಡೀಬೇಡ ನಮ್ಮವ್ವಾ!" ಎಂದು ದೊಡ್ಡದೊಂದು ಡಬರಿಯ ತುಂಬ ರಸಾಯನವನ್ನೂ ಅಭಿಷೇಕ ಮಾಡಿ ಉಳಿದಿದ್ದ ಹಾಲನ್ನೂ ತಂದಿಟ್ಟನು. ಕೆಲವರು ಬೇವಿನ ಕೊನೆಗಳಿಂದ ಬಿಜ್ಜಣವಿಕ್ಕಿ, ಅರಿಸಿನವನ್ನು ಎರಚಿದರು. ದೇವಸ್ಥಾನದ ಅರಿಸಿನದ ಬಟ್ಟಲು ಬರಿದಾಯಿತು. ರಂಗೇಗೌಡ-ಮಾರಮ್ಮನು ಆಗಾಗ ಗರ್ಜಿಸುತ್ತ, ತುಂಬಿದ ತೊರೆಯಂತೆ ಮೊರೆಯುತ್ತ, ಪದೇ ಪದೇ ಹಲ್ಲು ಕಡಿಯುತ್ತ, ರಸಾಯನವನ್ನೂ ಹಾಲನ್ನೂ ಸಮರ್ಪಣೆಮಾಡಿಕೊಂಡಳು. ಬಳಿಕ, "ಈಗ ಹೊಟ್ಟೆ ತುಂಬಿದೆ, ಮಗನೇ ಬೇಕಾದ್ದು ಬೇಡು" ಎಂಬ ಉತ್ತರ ಹೊರ

ಟಿತು ಬೈರಣ್ಣನಿಗೆ ಹೊಟ್ಟೆಯುರಿ, ಅವನ ಹೃದಯದಿಂದ ಚೇಳು ಬಾಣಗಳೂ, ಹಾವು ಬಾಣಗಳೂ ಸುರಸುರನೆ ಎದ್ದು ಹೊರಗೆಹೋಗಲು ಮಾರ್ಗವನ್ನು ಹುಡುಕುತ್ತಿದ್ದುವು ಪೂಜಾರಿಯು ಭಕ್ತಿಭಾವದಿಂದ ಕೂಡಿ, ತನ್ನ ಸೊಂಟದಿಂದ ನಸ್ಯದ ಡಬ್ಬಿಯು ಕಳಗೆ ಬಿದ್ದುಹೋದುದನ್ನೂ ಗಮನಿಸದೆ, "ಮಹಾತಾಯಿ! ಕೋರಡೆಯು ಕೆಳಗೆ ಬಿದ್ದದೆ, ಈಗ ಧೈರ್ಯವಾಗಿ ಹೇಳ್ತೀನಿ ಸುತ್ತಮುತ್ತಲ ಹಳ್ಳಿಗಳಾಗೆ ಪ್ಲೇಗು ಮಾರಮ್ಮನ ದಳ್ಳುರಿ ಎದ್ದದೆ ನಮ್ಮ ನಮ್ಮೂರು ಸ್ವಸ್ಥವಾಗಿದ್ದಾತೆ'" ಎಂದು ಕೇಳಿದನು ರಂಗೇಗೌಡ—ಮಾರಮ್ಮನು, "ಮಾರಮ್ಮ ನಾನೊಬ್ಬಳೇ, ಈಗ ಬಂದಿರೋವು ನೆಲೇ ಅರಿಯದೆ ದಿಕ್ಕೆಟ್ಟು ಅಲಿಯೋ ಮುಕ್ಕಗಳು, ಒಂದಲ್ಲ, ಎರಡಲ್ಲ, ಐದು ಬಂದವೆ ಹಾಳು ದೇವತೆಗಳು ಪಿಳೇಕು (ಪ್ಲೇಗು) ದೇವತೆ ಅವುಗಳಾಗೆ ದೊಡ್ಡ ಪೀಡೆ ಐದೂ ಬಲೇ ಬಲವಾಗಿವೆ ಊರು ಬಾಗಲಿಗೆ ಬಂದು ಆತುಕೊಂಡಿವೆ, ನುಗ್ಗಬೇಕು ಒಳಕ್ಕೇ ಅಂತ ನಾನು ಕಷ್ಟಪಟ್ಟು ತಡೀತಾ ಇದ್ದೀನಿ, ಆದರೂ ಪೂರ್ತಾ ತಡಿಯೋ ಹಂಗೆ ಕಾಣೆ, ಆದರೂವೆ ಸಕ್ತಿಮೀರಿ ತಡೀತೀನಿ" ಎಂದು ಉತ್ತರಬಂದಿತು ಈ ಉತ್ತರವನ್ನು ಕೇಳಿ ಎಲ್ಲರಿಗೂ ತಳಮಳವುಂಟಾಯಿತು ಪೂಜಾರಿಯು, 'ಹೋಗಲಿ ನಮ್ಮವ್ವಾ! ನೀನು ಮಾಡೋದೇನು! ಸ್ಕಲಾದಷ್ಟು ಮಾಡ್ತೀಯೆ ಒಂದು ಸಮಯ ಪಿಳೇಕು ದೇವತ ಬಂದರೆ ಯಾರ ಮನೇ ಮುರಿದಾಳು' ನಮ್ಮ ಮನೇಗೇನಾರಾ ಭಯವಾ'" ಎಂದು ಕೇಳಿದನು ಅದಕ್ಕೆ ಉತ್ತರವಾಗಿ, "ನೀನು ನನ್ನ ಭಕ್ತ, ನಿಂಗೆ ಭಯವಿಲ್ಲ ಅವಳು ಬಂದರೆ ಈ ಊರಾಗೆ ದೊಡ್ಡ ತಲೆಯನಿಸಿಕೊಂಡಿರೋ ಕಾಗೆ ಬಣ್ಣದ ಹೈದನಿಂದ ಮುರೀತಾಳೆ, ಅವನು ನನ್ನ ಭಕ್ತನ್ನ ಕಾಡ್ತಾನೆ ಅವನು ನಂಗೂ ನನ್ನ ಭಕ್ತಂಗೂ ಶರಣು ಬಿದ್ದರೆ, ಪಿಳೇಕುದೇವತೆಗೆ ಬಲಿಯಾಗದ ಹಂಗೆ ಕಾಪಾಡ್ತೀನಿ"

ಇದನ್ನು ಕೇಳಿ ಬೈರಣ್ಣನಿಗೆ ಕೋಪವು ಮಿತಿಮೀರಿ ನೈಮೇಲೆ ಎಚ್ಚರತಪ್ಪಿದಂತಾಗಿ, ನಾನು ಹಿಂದೆ ಹೇಳಿದ ಬಾಣಗಳು ಹಾರಲು ಅವಕಾಶವಾಯಿತು, ಹೊರಟಿತು ದುಳ್ಳುರಿಯ ಸಿಡಿಲು ಬೈರಣ್ಣನು, ನೆಲದಮೇಲೆ ಬಿದ್ದಿದ್ದ ಕೋರಡೆಯನ್ನು ಕೈಗೆ ತೆಗೆದುಕೊಂಡು ರಂಗೇಗೌಡ

ನಿಗೆ ಯಥಾಶಕ್ತಿಯಾಗಿ ಸೇವೆ ಮಾಡಲು ಆರಂಭಿಸಿದನು ರಂಗೇಗೌಡನು "ಆ! ಆ! ನಾನು ಮಾರಮ್ಮ! ನನ್ನ ಮ್ಯಾಗೆ ಕೈಮಾಡ್ತೀಯಾ" ಎಂದು ತತ್ತರಿಸಿದನು ಬೈರಣ್ಣನು, "ನೀನು ಮಾರಮ್ಮನಾದರೆ, ನಾನು ಬೀರೇ ದೇವರು, ನನ್ನ ಭಕ್ತನ ಮಾತೇಕೆ ನೀನು ಎತ್ತಿದ್ದು ?" ಎಂದು ಮತ್ತೆ ನಾಲ್ಕು ಏಟುಗಳನ್ನು ಕೊಟ್ಟನು ಮಾರಮ್ಮನು ಪಲಾಯನನಾಗಿ ರಂಗೇ ಗೌಡನು ಮಾತ್ರವೇ ಉಳಿಯಬೇಕಾಯಿತು ಪೂಜಾರಿಯು ಏನೂ ತೋರ ದವನಾಗಿ ಬೈರಣ್ಣ-ಬೀರೇದೇವರಿಗೂ ಮಂಗಳಾರತಿ ಮಾಡಿದನು ದೇವರು, "ತಡಿ, ತಡಿ, ಇವಳನ್ನ ತೀರಿಸಿಬಿಡ್ತೀನಿ" ಎಂದು ರಂಗೇಗೌಡನಿಗೆ ಮತ್ತೆ ನಾಲ್ಕು ಏಟುಗಳನ್ನು ಕೊಟ್ಟುದನ್ನು ಕಂಡು ಎಲ್ಲರೂ ಬೆರಗಾದರು ಕೆಲವರು ಮನೆಗಳಿಗೆ ಓಡಿಹೋದರು ತಮಗಲ್ಲ ದೇವರ ಪ್ರಸಾದವು ದೊರೆಯುವುದೋ ಎಂಬ ಭಯವೇ ಅದಕ್ಕೆ ಕಾರಣ ರಂಗೇಗೌಡನು, "ನಾನೋ, ನಾನೋ, ರಂಗೇಗೌಡ! ಇದುವರೆಗ ಮಾರಮ್ಮನಾಗಿದ್ದ ನನ್ನ ಹೊಡಿಯೋದೇಕೋ ನೀನು ?" ಎಂದನು ಬೈರಣ್ಣ--ಬೀರೇದೇವರು, "ನಿನ್ನ ಕೋರ್ಟಿಗೆ ಒಪ್ಪಿಸಿದ್ದೀನಿ ಅವರೇ ನಿನಗೆ ಉಡುಗೆರೆ ಕೊಡ್ತಾರೆ ನಾನ್ಯಾಕ ಹೊಡೀಲಿ ನಾನು ಹೊಡೀಲೇ ಇಲ್ಲವಲ್ಲಾ! ನಾನೆಲ್ಲಿ ಹೊಡೆದೆ? ಈ ಚಾವಟಿಯಾಕೆ ನನ್ನ ಕೈಲಿ ಬಂತು ?" ಎಂದು ಉತ್ತರ ಹೇಳಿ ಕೋ ರಡೆಯನ್ನು ಕಳಕ್ಕೆಸದು ಓಡಿಹೋದನು ಎಲ್ಲರಿಗೂ ಊಟದ ವೇಳೆಯು ಸಮೀಪಿಸಿತು ಹನುಮಂತೇಗೌಡ ಒಬ್ಬ ಹೊರತು ಉಳಿದವರೆಲ್ಲರೂ ಮಾರಮ್ಮನಗಿಂತ ಬೀರೇದೇವರ ಬಲುಮೆಯೇ ದೊಡ್ಡದೆಂದು ಸಿದ್ಧಾಂತ ಮಾಡಿಕೊಂಡು, ಮೇಲಕ್ಕೆ ಕೈಮುಗಿದು ಮನೆಗಳಿಗೆ ಹೋದರು ಆ ಮುದುಕನೊಬ್ಬನು ಮಾತ್ರ ಏನೋ ಒಂದು ವಿಧದ ಸಂಶಯದಿಂದ ಕೂಡಿ ಕಿರುನಗೆನಕ್ಕು ಮೊದಲು ನಾನೂ ಮೋಸಹೋಗಿದ್ದೆನಲ್ಲಾ! ಮಾರಮ್ಮನಿಗೆ ತಕ್ಕ ಬೀರೇದೇವರು ಸಿಕ್ಕಿದ" ಎಂದು ತನ್ನ ಮನಸ್ಸಿನಲ್ಲೇ ಹೇಳಿ ಕೊಂಡನು ರಂಗೇಗೌಡನ ಮೋರೆಯು ಪೆಚ್ಚುಬಿದ್ದಿದ್ದಿತು ನುಂಗಲಾರದ ತುತ್ತನ್ನು ನುಂಗಿ ಅನುಭವಿಸಿದ್ದವನು ಅವನು ಆಗ ಅವನ ಕೋಪ ವೆಲ್ಲವೂ ಬೈರಣ್ಣನ ಮೇಲೆ ಮರುದಿವಸ ಹುಡುಗನೂ ತಪ್ಪಿಸಿಕೊಂಡನು.

ರಂಗೇಗೌಡನ ರೊಟ್ಟಿಯು ಜಾರಿ ತುಪ್ಪಕ್ಕೆ ಬಿದ್ದಂತಾಯಿತು. ಬೈರಣ್ಣನೇ ಆ ಹುಡುಗನನ್ನು ಕೊಂಡಿರಬೇಕೆಂಬುದು ಸಿದ್ಧಾಂತವಾಯಿತು.

ಪೋಲೀಸಿನವರು ಮುಂದೆ ನಡೆಯಿಸಿದ ಕಾರ್ಯಕಲಾಪಗಳು ಇಲ್ಲಿ ಅಪ್ರಕೃತ. ಬೈರಣ್ಣನಿಗೆ ನೇಣುಹಾಕುವುದು ಖಂಡಿತವೆಂದೂ, ಕಾಳಮ್ಮನ ತಾಳಿಯು ಹೋಗುವ ದುರದೃಷ್ಟವನ್ನು ಕಂಡು ತನಗೆ ಅನುತಾಪವೆಂದೂ, ಚೆನ್ನಮ್ಮನು ತನ್ನ ಗೆಳತಿಯರೆಲ್ಲರಿಗೂ ಹೇಳುತ್ತಲೇ ಇದ್ದಳು. ಆದರೆ, ಅವಳ ಮುಖವನ್ನು ನೋಡಿದರೆ ಅನುತಾಪದ ಸೂಚನೆಯೇನೂ ಇರಲಿಲ್ಲ. ಹುಡುಗನು ತಪ್ಪಿಸಿಕೊಂಡು ಹೋದ ಎರಡನೆಯ ದಿನ ಅವನ ತಂದೆಯನ್ನು ಕರೆತರಲು ರಂಗೇಗೌಡನು ಆಳನ್ನು ಅಟ್ಟಿದನು. ದಾರಿಯಲ್ಲಿ ಹೊಳೆಯನ್ನು ದಾಟಿ ಹೋಗಬೇಕಾಗಿದ್ದಿತು. ಹೊಳೆಯಲ್ಲಿ ಅಂದು ಪ್ರವಾಹ. ಅದು ಇಳಿಯುವವರೆಗೂ ಮರು ಮಾತೇ ಇಲ್ಲ. ತಾನು ರಂಗೇಗೌಡನಮೇಲೆ ಎಸೆದ ಕೆಲವು ಕಲ್ಲುಗಳು ಗುರಿತಪ್ಪಿ ಹೋದುದೊಂದು, ತಾನು ಇನ್ನೂ ಅವನನ್ನು ಕೋಟಲೆಪಡಿಸಬೇಕೆಂದಿರುವಾಗಲೇ ಈ "ಅಪಾಂತರ" ಒದಗಿದುದೊಂದು. ಇವುಗಳಿಂದ ಬೈರಣ್ಣನೂ ಮಂಕಾದನು. ಅವನಿಗೆ ಯಾವಾಗ ಪೋಲೀಸಿನವರು ತನ್ನನ್ನು ಹಿಡಿಯುವರೋ ಎಂಬ ತಳಮಳ. ರಂಗೇಗೌಡನನ್ನು ನಿಂಬೆಯ ಹಣ್ಣಿನಂತೆ ಹಿಂಡಿಬಿಡಬೇಕೆಂದು ಅವನಿಗೆ ಆಸೆ. ಆದರೆ, ನಿಂಬೆಯ ಹಣ್ಣು ನುಣಿಚಿಕೊಂಡರೆ, ಮಾಡುವದೇನು? ಉರಿಯುವ ಕೊಳ್ಳಿಯು ದೊಡ್ಡ ಉರಿಯನ್ನು ತೋರಿ ಕೊನೆಗೆ ಆರಿಹೋಗುವಂತೆ, ತಾನೂ ಏನಾದರೂ ಮಾಡಿ ರಂಗೇಗೌಡನಮೇಲೆ ಮತ್ತೊಂದು ಅಪರಾಧವನ್ನು ಹೇರಲು ಅವನಿಗೆ ಕಾತರ.

ಇಷ್ಟರಲ್ಲಿ, ತೂಕಡಿಸುವವನಿಗೆ ಹಾಸಿಗೆಯೂ ತಲೆಗಿಂಬೂ ದೊರೆತಂತಾಯಿತು. ಬೈರಣ್ಣನ ತೋಟದಲ್ಲಿ ಅವನ ಎತ್ತು ಕಾಲುಮುರಿದು ಬಿದ್ದಿದ್ದಿತು. ಅದಕ್ಕೆ ರಂಗೇಗೌಡನನ್ನೇ ಹೊಣೆಯಾಗಿ ಮಾಡುವದು ಗೊತ್ತೇ ಇದೆ. ರಂಗೇಗೌಡನು ತನ್ನ ಕಾಲಿನ ಒಂದು ಗಾಯಕ್ಕೆ ಔಷಧದ ಹಸುರನ್ನು ಹುಡುಕುತ್ತ ಅಲೆದಾಡುತ್ತಿದ್ದನು. ಅದೂ ಬೈರಣ್ಣನ ತೋಟದ ಬೇಲಿಯ ಅಂಚಿನಲ್ಲಿ, ಬಹಳ ದೂರವಾಗಿ ನಿಂತಿದ್ದವರು ಕೆಲವರು ಅಂದಿನ

ಅಲೆದಾಟವನ್ನು ನೋಡಿದ್ದರು ಅವರೆಲ್ಲರೂ ಬೈರಣ್ಣನಿಗೆ ಆಪ್ತರು ಎತ್ತಿಗೆ ಚಿಕಿತ್ಸೆ ಮಾಡಿಸಿ, ಬೈರಣ್ಣನು ರಂಗೇಗೌಡನ ಮೇಲೆ ಮೊಕದ್ದಮೆ ಯನ್ನು ಹಾಕಿದನು ಅವನ ಆಪ್ತರೆಲ್ಲರೂ ಸಾಕ್ಷ್ಯವನ್ನು ನುಡಿಯಲು ಸಿದ್ಧರಾದರು. ವ್ಯವಹಾರವು ಪ್ರಾರಂಭವಾಯಿತು

ಈ ವೇಳೆಗೆ ಹುಡುಗನು ತಪ್ಪಿಸಿಕೊಂಡು ಐದಾರು ದಿನಗಳು ಕಳೆದು ಹೋಗಿದ್ದುವು ಬೈರಣ್ಣನಿಗೆ ಮುಖದ ಮೇಲೆ ಕಳೆಯೇ ಇರಲಿಲ್ಲ; ಅವನಿಗೆ ಯಾವಾಗ ಪೋಲೀಸಿನವರು ಬರುವರೋ, ಯಾವ ಗಳಿಗೆಯಲ್ಲಿ ತಾನು "ಲಾಕೂಪು" ಸೇರಬೇಕಾದೀತೋ ಎಂಬ ಭಯ ಈ ಮಧ್ಯದಲ್ಲಿ ತಾನು ಹಿಂದು ಮುಂದು ನೋಡದೆ ಸುಮ್ಮನೆ ಮೊಕದ್ದಮೆಗಳನ್ನು ನಡೆಯಿಸುತ್ತಾ ಬಂದುದರಿಂದ ಹೀಗೆ ಕಷ್ಟಗಳು ಬಂದು ಒದಗಿರುವವೆಂಬು ದನ್ನು ಅವನು ಯೋಚಿಸುನನು ದ್ವೇಷ ಸಾಧನೆಯು ಯಾರಿಗೂ ತರವಲ್ಲ ವೆಂದು ಹನುಮಂತೇಗೌಡನು ಬುದ್ಧಿವಾದ ಹೇಳುತ್ತಿದ್ದುದು ಅವನಿಗೆ ನೆನ ಪಾಗಿ, ವೃದ್ಧನ ಮಾತಿನಲ್ಲಿ ವಿವೇಕವುಂಟೆಂದು ಅವನಿಗ ಹೊಳೆಯುವುದು ಆದರೂ ರಂಗೇಗೌಡನು ಮೊದಲು ಮೊಕದ್ದಮೆಯನ್ನು ಹಾಕದಿದ್ದರೆ ತಾನು ಯಾವಾಗಲೂ ಅವನ ಮೇಲೆ ಮೊಕದ್ದಮಯನ್ನು ಹಾಕುತ್ತಿರಲಿಲ್ಲ ವೆಂದೂ, ಆದಕಾರಣ, ದೇವರು ತನ್ನ ಮೇಲೆ ಕೋಪಮಾಡುವಂತಿಲ್ಲ ವೆಂದೂ, ಅವನು ತನ್ನ ಮನಸ್ಸಿಗೆ ತಾನೇ ಸಮಾಧಾನವನ್ನು ಹೇಳಿಕೊಳ್ಳು ವನು ಆದರೂ, ಅವನ ಮನಸ್ಸಿಗೆ ತೃಪ್ತಿಯಿಲ್ಲ

ಈ ಮಧ್ಯೇ ಊರಿಗೆ ಪ್ಲೇಗು ರೋಗವು ಬಂದೇ ಬಂದಿತು ರಂಗೇ ಗೌಡನ ಮನೆಗೆ ಬಂದಿದ್ದ ನಂಟರೂ, ಬೈರಣ್ಣನ ಮನೆಗೆ ಬಂದಿದ್ದ ನಂಟರೂ, ಎಲ್ಲರೂ ಹೇಳದೆ ಕೇಳದೆ ಓಡಿಹೋದರು ಅವರೆಲ್ಲರೂ ಹೊರಟುಹೋದುದಕ್ಕೆ ನೆರೆಯ ಬೀದಿಯಲ್ಲಿ ಕೆಲವರ ಮನೆಯಲ್ಲಿ ನಾಲ್ಕೈದು ದಿನಗಳಿಂದ ಇಲಿಗಳು ಬೀಳುತ್ತಿದ್ದುದೇ ಕಾರಣ ಬಂಧುಗಳು ಹೊರಟು ಹೋದ ಮರುದಿನವೇ ಬೈರಣ್ಣನ ತಾಯಿಯು ಊರಿಗೆ ಬಂದಳು ಅವಳು ಎರಡು ಮೂರು ವರುಷಗಳಿಂದಲೂ ಮಗಳ ಮನೆಯಲ್ಲಿದ್ದಳು ಎತ್ತು ಗಳನ್ನು ಕೊಳ್ಳಲು ಹೋಗಿದ್ದವನೊಬ್ಬನು, ಮಾರಮ್ಮ ಮೈದುಂಬಿ ಬೈರಣ್ಣ

ನಿಗೆ "ಪಿಳೇಕು" ತಗುಲುವುದೆಂದು ಹೇಳಿದ ಸುದ್ದಿಯನ್ನು ಕೇಳಿ ಅವಳು ಓಡಿಬಂದಳು. ಬೈರಣ್ಣನು, "ಈಗ್ಯಾಕೆ ಬಂದೆ? ಪಿಳೇಕು, ಇಲಿಗಳು ಬಿದ್ದಿವೆ, ಊರು ಬಿಡ್ತೀವಿ" ಎಂದನು. ಅವಳು, "ಮಗಾ! ಮುರಿದರೆ ಪಿಳೇಕು ಮಾರಮ್ಮ ನನ್ನಾರಾ ಮುರಿದು ನಿನ್ನ ಬಿಟ್ಟಿರಲೀ ಅಂತ ಓಡಿ ಬಂದೆ. ನಾನು ಇವತ್ತಿನಿಂದ ತಲೆಯನ್ನು ಬಾಗಿಲತಾವ ಹಾಕಿಕೊಂಡು ಮಲಿಕ್ಕೊಳ್ತೀನಿ. ಪಿಳೇಕು ಮಾರಮ್ಮ ಬಂದರೂ ಮೊದಲು ನಾನೇ ಅವಳ ಕಣ್ಣಿಗೆ ಬೀಳೋಕೆ ಸರಿಹೋಗ್ತದೆ" ಎಂದಳು. ತಿಂದು ತೇಗುತ್ತಿದ್ದ ಬಂಧುಗಳೆಲ್ಲರೂ ಹೇಳದೆ ಕೇಳದೆ ಓಡಿಹೋದುದನ್ನು ನೋಡಿದ್ದ ಬೈರಣ್ಣನಿಗೆ ಈ ಮಾತುಗಳನ್ನು ಕೇಳಿ ಕಣ್ಣಿನಲ್ಲಿ ನೀರು ಬಂದಿತು. ಮುದುಕಿಯು, "ಇದ್ಯಾಕೆ ಹಿಂಗಾಡ್ತೀ? ಅಳಬ್ಯಾಡ ಮಗಾ! ಮಾರಮ್ಮ ನಿನ್ನ ಏನೂ ಮಾಡಾಕಿಲ್ಲ. ಮಾರಮ್ಮ ಮೈದುಂಬಿ ಹೇಳೋದು ಎಷ್ಟೋ ಸಲ ಸುಳ್ಳಾಗೈತೆ. ಇದರ ಮೇಲೆ ನಾನು ಬಾಗಿಲ್‌ದುರಿಗೇ ಮಲಿಕ್ಕೊಂತೀನಿ" ಎಂದಳು.

ಅಷ್ಟರಲ್ಲಿ ಅವಳು ಬೀದಿಯಲ್ಲಿ ಹೋಗುತ್ತಿದ್ದ ರಂಗೇಗೌಡನನ್ನು ಕಂಡು, "ಏನೋ ಮಗಾ! ಮಗಾ ರಂಗಣ್ಣ! ಚೆನ್ನಾಗಿದ್ದೀಯಾ?" ಎಂದಳು. ಹಿಂದಣ ವಿಶ್ವಾಸ. ರಂಗೇಗೌಡನು ಉತ್ತರ ಹೇಳದೆ ಹೊರಟು ಹೋದುದನ್ನು ಕಂಡು, ಅವಳಿಗೆ ಆಶ್ಚರ್ಯವಾಯಿತು. ಬೈರಣ್ಣನು ಗುಡಿಸಲು ಹಾಕಿಸಲು ಹೊರಟುಹೋದನು. ಹೊಲಗಳ ಕೊಯ್ಲು ಮುಗಿದಿದ್ದಿತು. ಅವರೆಯಗಿಡ ಒಣಗುವುದರಲ್ಲಿದ್ದಿತು. ಎಲ್ಲರೂ ಅವರವರ ಹೊಲಗಳಲ್ಲಿ ಗುಡಿಸಲುಗಳನ್ನು ಕಟ್ಟಿಸುತ್ತಿದ್ದರು. ರಂಗೇಗೌಡನು ಉತ್ತರ ಹೇಳದೆ ಹೊರಟು ಹೋದುದರ ಕಾರಣವನ್ನೆಲ್ಲ ಕಾಳಮ್ಮನು ಮುದುಕಿಗೆ ತಿಳಿಯ ಹೇಳಿದಳು. ಮುದುಕಿಯು ಆಗಾಗ ನಿಟ್ಟುಸಿರುಬಿಡುತ್ತ ಎಲ್ಲವನ್ನೂ ಕೇಳಿದಳು. ಕಥೆಯು ಪೂರೈಸಿದಮೇಲೆ, "ಬೈರಣ್ಣ ಏನು ಕೆಲಸ ಮಾಡಿಕೊಂಡನೇ ನಮ್ಮವ್ವಾ! ಅವರಪ್ಪ ದೊಡ್ಡಗೌಡ ಇದ್ದರೆ ಇದ ನೋಡಿ ಅತ್ತುಬಿಡೋರು. ಅವರ ಕಾಲದಾಗೆ ಎಷ್ಟು ಸ್ನೇಹವೇ ನಮ್ಮವ್ವಾ! ನೀನಾರಾ ನಿನ್ನ ಗಂಡಂಗೆ ಬುದ್ಧಿ ಹೇಳಕಾಗ್ದಿತ್ತ ಮಗಾ! ಇಷ್ಟಕ್ಕೂ ನೀನು

ಹುಡುಗೆ, ಗಂಡಸರು ಹೆಂಗಸಿನ ಮಾತ ಕೇಳ್ತಾರಾ? ಹೆಣ್ಣಾದ್ರೇನು ಗಂಡಾದ್ರೇನು, ನಡತೆ ಚೆಂದಾಗಿರಬೇಕು  ರಂಗೇಗೌಡ ತಾನೆ ಹಿಂಗೆ ಕುಣಿಯೋದಾ?'' ಎಂದಳು  ಬೈರಣ್ಣನು ಮನೆಗೆ ಬಂದಮೇಲೆ ಅವನಿಗೆ ಎಷ್ಟೋ ಬುದ್ಧಿವಾದವನ್ನು ಹೇಳಿದಳು

ತಪ್ಪಿಸಿಕೊಂಡಿದ್ದ ಹುಡುಗನು ಸಿಕ್ಕಿದುದರಿಂದ ಬೈರಣ್ಣನಮೇಲೆ ಖೂನಿ ಮೊಕದ್ದಮೆಯು ನಡೆಯಲು ಅವಕಾಶ ತಪ್ಪಿತು  ಮಾರಮ್ಮನ ಗುಡಿಯಲ್ಲಿ ಹಗರಣ ನಡೆದ ದಿನ ರಾತ್ರಿ ಊಟ ಬಹಳ ಹೊತ್ತಾಯಿತು  ತಮ್ಮ ತಾಯಿಯು ತನಗೆ ಬೇಗ ಊಟಕ್ಕೆ ಬಡಿಸಲಿಲ್ಲವೆಂಬ ಕೋಪದಿಂದ, ಆ ಹುಡುಗನು ಕರುಗಳನ್ನೆಲ್ಲ ಬೀದಿಗೆ ಅಟ್ಟಿಬಿಟ್ಟು, ಎಲ್ಲರೂ ಏಳುವುದಕ್ಕೆ ಮುಂಚೆಯೇ ಊರಿಗೆ ಹೊರಟುಹೋದನು  ತಂದೆಗೆ ದೂರನ್ನು ಹೇಳಲು ಅವನಿಗೆ ಆತುರ  ಅವನು ಊರಿಗೆ ಹೋದಬಳಿಕ ಹೊಳೆಯಲ್ಲಿ ಪ್ರವಾಹವು ಬಂದಿತು  ಪೋಲೀಸಿನವರು ವಿಚಾರಮಾಡಿ, ಈ ಅಂಶಗಳನ್ನು ಹೊರಗೆಡಹಿ, ಹುಡುಗನನ್ನು ರಂಗೇಗೌಡನ ಮನೆಗೆ ಕರೆತಂದರು  ಬೈರಣ್ಣನ ಮೇಲೆ ಬೆಟ್ಟದಂತೆ ಬಂದಿದ್ದ ಅಪವಾದವು ಮಂಜಿನಂತೆ ತೇಲಿಹೋಯಿತು

ಎತ್ತಿನ ಕಾಲನ್ನು ಮುರಿದ ಮೊಕದ್ದಮೆಯು ನಡೆಯುತ್ತಿದ್ದಿತು  ತಾನು ಮಾಡದ ತಪ್ಪಿತವನ್ನು ದ್ವೇಷದಿಂದ ತನ್ನಮೇಲೆ ಹಾಕಿರುವರೆಂದು ಹೇಳುತ್ತ ರಂಗೇಗೌಡನು ಬಾಲವನ್ನು ತುಳಿದ ನಾಗರಹಾವಿನಂತೆ ಬುಸುಗುಟ್ಟುತ್ತಿದ್ದನು  ಆದರೆ ಅದನ್ನು ಕೇಳುವವರಾರು? ಆ ಮೊಕದ್ದಮೆಯನ್ನು "ಆರೋಗ್ಯನುಂಟಗೆ'' (ಆರ್ಗ್ಯುಮೆಂಟಗೆ) ಇಟ್ಟಿದ್ದಾರೆ ಎಂದುಕೊಂಡು ಉಭಯ ಕಕ್ಷಿಯವರೂ ಸಂತೋಷದಿಂದಿದ್ದರು  ಮೊಕದ್ದಮೆಯಲ್ಲಿ ಹುರುಳಿಲ್ಲದ ಕಾರಣ, ಹಾಗೆ ಮಾಡಿರಬೇಕೆಂದು ರಂಗೇಗೌಡನ ಊಹೆ  ಮೊಕದ್ದಮೆಯು ಬಹಳ ಬಲವಾಗಿರುವುದರಿಂದ, ಅಪರಾಧಿಯು ಬೊಗಳುವುದನ್ನು ಬೊಗಳಿಬಿಡಲೀ ಎಂದು ನ್ಯಾಯಸ್ಥಾನದವರು "ಆರೋಗ್ಯಮೆಂಟಿಗೆ'' ಇಟ್ಟಿದ್ದಾರೆಂದು ಬೈರಣ್ಣನಿಗೆ ಭರವಸೆ  "ಆರೋಗ್ಯಮೆಂಟನ'' ತಾರೀಖು ಇನ್ನೂ ದೂರದಲ್ಲಿದ್ದಿತು  ಪಟೇಲನು ಮತ್ತಾವುದೋ ಮೊಕದ್ದಮೆಯಲ್ಲಿ ಸಾಕ್ಷಿಯಾಗಿ ನ್ಯಾಯಸ್ಥಾನಕ್ಕೆ ಹೋಗಿದ್ದನು. ಆ ದಿನವೇ ತನ್ನ ಮೊಕ

ದ್ದಮೆಯೂ ತೀರ್ಮಾನವಾಗಿರಬೇಕೆಂದು ರಂಗೇಗೌಡನಿಗೆ ಚಪಲ. ಮೊಕದ್ದಮೆಯು ಸುಳ್ಳೆಂಬುದೇನೊ ಅವನಿಗೆ ತಿಳಿದ ವಿಷಯ. ಆದಕಾರಣ, ಅದರಲ್ಲಿ ಹುರುಳಿಲ್ಲವೆಂದೂ, ಇದರಮೇಲೆ ಪಟೇಲನೂ ನ್ಯಾಯಸ್ಥಾನಕ್ಕೆ ಆ ದಿವಸ ಹೋಗಿದ್ದುದರಿಂದ ಜಡ್ಜಿಯೋರು ಅದನ್ನು ತೀರ್ಮಾನಿಸಿದ್ದರೂ ಇರಬಹುದೆಂದೂ, ಅವನಿಗೆ ಊಹೆಯಮೇಲೆ ಊಹೆ, ಅನುಮಾನದ ಮೇಲೆ ಅನುಮಾನ. ಆದಕಾರಣ, ಪರೀಕ್ಷೆಯಲ್ಲಿ ಪ್ಯಾಸಾಗಿಯೇ ಆಗುತ್ತದೆಂದು ನಂಬಿರುವ ವಿದ್ಯಾರ್ಥಿಯು ವರ್ತಮಾನ ಪತ್ರಿಕೆಯಲ್ಲಿ ಫಲಿತಾಂಶದ ಪಟ್ಟಿಯನ್ನು ನೋಡಲು ಹೊರಡುವ ಹಾಗೆ, ನಮ್ಮ ರಂಗೇಗೌಡನೂ ಪಟೇಲನ ಆಗಮನವನ್ನೇ ಎದುರುನೋಡುತ್ತಿದ್ದನು. ಕೊನೆಗ ಪಟೇಲನು ಸಿಕ್ಕಿಯೇ ಸಿಕ್ಕಿದನು. ಅವನು ಬಹಳ ಕುಚೋದ್ಯದ ಮನುಷ್ಯ. ಇತರರನ್ನು ವಿನೋದಕ್ಕಾಗಿ ಹುಸಿಹೆದರಿಕೆಗಳಿಂದ ಪೀಡಿಸುವುದರಲ್ಲ ಪ್ರವೀಣ. ಆ ದಿನ ಅವನು ಹೊಸ ಕಿರಿಕಿ ಚಡಾವನ್ನು ಮೆಟ್ಟಿಕೊಂಡು ಹೋಗಿದ್ದನು. ದಾರಿಯಲ್ಲಿ ಚಡಾವು ಅವನ ಕಾಲನ್ನು ಕಚ್ಚಿ, ನಾಲ್ಕೈದು ಕಡೆ ಹೊಪ್ಪಳೆಯೆದ್ದಿದ್ದಿತು, ಹಿಮ್ಮಡಿಯಲ್ಲ ರಕ್ತ ಸೋರುತ್ತಿದ್ದಿತು. ಊರಿಗಲ್ಲ ದೊಡ್ಡವನಾಗಿ ಕೈಯಲ್ಲ ಚಡಾವನ್ನು ಹಿಡಿದುಕೊಂಡು ಹೋಗಲು ಅವನಿಗೆ ಅವಮಾನ, ನಡೆಯಲು ಪ್ರಾಣಸಂಕಟ. ಕೊನೆಗೂ ಚಡಾವನ್ನು ಕೈಗೆ ತೆಗೆದುಕೊಳ್ಳದೆ ಅವನು ಮೆಲ್ಲಗೆ ಕುಂಟುತ್ತಲೇ ಬರುತ್ತಿದ್ದನು. ಅವನನ್ನು ನೋಡಿ ರಂಗೇಗೌಡನು ಕೇಳಿದ ಕುಶಲ ಪ್ರಶ್ನೆಗೆ ಉತ್ತರವಾಗಿ ಪಟೇಲನು ತನ್ನ ಕಷ್ಟಗಳನ್ನು ಹೇಳಿಕೊಂಡಾಗ ರಂಗೇಗೌಡನು ತನ್ನ ಅನುತಾಪವನ್ನು ಸೂಚಿಸಲೇ ಇಲ್ಲ, ಹುಸಿನಗೆ ನಗುತ್ತ, “ಬಾಳೇಹಣ್ಣಿನಂಥಾ ಮನುಸ, ಸುಖದ ಪುಟ್ಟಸಾಮಿಗಳಿಗೆ ಆಗೋದೇ ಹಿಂಗೆ. ಚಡಾವು ಕಾಲು ಕಡಿದರೆ ಹಿಂಗೆ ಕುಂಟಬೇಕಾ? ಕಾಲ ಬಲೀ ನಾಜೋಕಿಗೆ ಬಂತಣ್ಣಾ! ಇದೇನೋ ನಾಗಲೀಕತೆ ಅನ್ನೋದು?” ಎಂದನು. ಮೊದಲೇ ನೊಂದಿದ್ದ ಪಟೇಲನಿಗೆ ಇದರಿಂದ ಹೆಚ್ಚಾಗಿ ಕೋಪವೂ ಬಂದಿತು, ಕುಚೋದ್ಯ ಮಾಡುವುದಕ್ಕೆ ಅವಕಾಶವೂ ದೊರೆಯಿತು. ಹಿಂದಿದ್ದ ಅಧಿಕಾರಿಗೆ ವರ್ಗವಾಗಿ ಹೊಸ ಅಧಿಕಾರಿಯು ಕೆಲಸಕ್ಕೆ ಬಂದಿರುವುದಾಗಿಯೂ, ಆತನು ಬೆಂಕಿಯಂಥ ಮನುಷ್ಯ.

ನಾದುದರಿಂದ ತುಂಟರ ಪುಂಡಾಟವನ್ನು ಅಡಗಿಸುವುದಕ್ಕಾಗಿ ಹೆಠವನ್ನು ತಾಳಿರುವುದಾಗಿಯೂ, ಎತ್ತಿನ ಮೊಕದ್ದಮೆಯಲ್ಲಿ ರಂಗೇಗೌಡನಿಗೆ ಭಾರಿ ಜುಲ್ಮಾನೆಯನ್ನೂ ಒಂದು ತಿಂಗಳು ಸಜವನ್ನೂ ವಿಧಿಸಿ ಕರಕರನೆ ಹುಕುಂ ಬರೆದಿರುವುದಾಗಿಯೂ ಪಟೇಲನು ಹೇಳಿಬಿಟ್ಟನು ಹಾಗೆ ಸುಳ್ಳು ಹೇಳು ವುದರಲ್ಲಿ ಸಂಶಯಕ್ಕೆಡೆಗೊಡದೆ, ತಾನು ಗಂಭೀರವಾಗಿರುವಂತೆ ತೋರ್ಪ ಡಿಸಿಕೊಳ್ಳುತ್ತ, ತನ್ನ ಪಶ್ಚಾತ್ತಾಪವನ್ನೂ ಸೂಚಿಸಿದನು ರಂಗೇಗೌಡನ ಮುಖವು ತೀರ ಇಳಿದುಹೋಯಿತು ಆ ವೇಳೆಗೆ ಸರಿಯಾಗಿ ಬೈರಣ್ಣನೂ ಅಲ್ಲಿಗೆ ಬರಬೇಕೆ? ಇಂತಹದನ್ನಲ್ಲವೆ ದೈವಸಂಘಟನೆಯೆನ್ನುವುದು? ಪಟೇಲನಂತೂ ಹೊರಟೇಹೋದನು ರಂಗೇಗೌಡನು ಕಲ್ಲಿನ ಬೊಂಬೆಯ ಹಾಗೆ ಸ್ವಲ್ಪಹೊತ್ತು ನಿಂತಿದ್ದು, ಕೊನೆಗೆ ಬೈರಣ್ಣನ ಕಡೆಗೆ ರಣಹದ್ದಿನಂತೆ ದೃಷ್ಟಿಸಿ ನೋಡಿ, "ನನ್ನ ಹೊಟ್ಟೆಯೇ ಉರಿದುಹೋಯ್ತು, ಸುಳ್ಳು ಮೊಕ ದ್ದಮೆ ಮಾಡಿ ನನಗೆ ಸಜಾ ಮಾಡಿಸಿದೆ, ನಾಳೆಯೋ ಇವತ್ತೋ ನನ್ನ ಎಳಕೊಂಡು ಹೋಗ್ತಾರೆ, ನಮ್ಮ ವಂಶದಲ್ಲಿ ಯಾರಿಗೂ ಸಜಾ ಆಗಿರಲಿಲ್ಲ, ನನ್ನ ತಲೆಗೆ ಇಂಥ ಕಳಂಕ ಬಂತು, ನನ್ನ ಹೊಟ್ಟೇ ಉರಿಸಿದ ಹಾಗೆ ನಿನ್ನ ಮನೇ ಉರಿಸಿ ನಾನು ಊರುಬಿಟ್ಟು ಹೋಗ್ದೇ ಇದ್ದರೆ, ನನ್ನ ಕುರ್ರೋ, ಕುರ್ರೋ ಎಂತ ಕರಿ, ಥೂ ಅನ್ನು" ಎಂದು ಸಿಟ್ಟಿನಿಂದ ಹೇಳಿ ಹೊರಟು ಹೋದನು ರಂಗೇಗೌಡನ ಮನಸ್ಸಿನಲ್ಲಿ ಹಠ ಹುಟ್ಟಿ ಅವನು ಹೇಳಿದು ದನ್ನು ಮಾಡಿಬಿಡುವನೆಂದು ಬೈರಣ್ಣನಿಗೂ ಸ್ವಲ್ಪ ಕಳವಳವಾಯಿತು ರಂಗೇಗೌಡನಿಗೆ ಶಿಕ್ಷೆಯಾಯಿತೆಂಬ ವಿಷಯವು ಕಾಡುಕಿಚ್ಚಿನಂತೆ ಎಲ್ಲರ ಗುಡಿಸಿಲಿಗೂ ಕೆಲವು ನಿಮಿಷಗಳಲ್ಲೇ ಹರಡಿತು ಅವನೇ ಅನೇಕರೊಡನೆ ಅದನ್ನು ಹೇಳಿಕೊಂಡನು ಬೈರಣ್ಣನ ತಾಯಿಯು ಅದನ್ನು ಕೇಳಿ ಬಹಳ ಪೇಚಾಡಿದಳು ಕ್ಷಮಾಗುಣದಲ್ಲ ಅವಳು ಭೂದೇವಿ ಯಾವ ಜಾತಿ ಯಾದರೇನು? ಗುಣಕ್ಕೆ ಪೂಜ್ಯತೆಯು ಸಲ್ಲಲೇಬೇಕು

ಬೈರಣ್ಣನು ಏನೂ ತೋರದೆ, ಒಣಗಿದ ಮರದಹಾಗೆ ಎಷ್ಟೋ ಹೊತ್ತು ಅಲ್ಲಿಯೇ ನಿಂತುಬಿಟ್ಟಿದ್ದನು ಆ ವೇಳೆಗೆ ಸರಿಯಾಗಿ ಹನು ಮಂತೇಗೌಡನು ಅಲ್ಲಿಗೆ ಬಂದು ಬೈರಣ್ಣನನ್ನು ನೋಡಿ, "ಏನು ಹುಡುಗಾ!

ಕೊನೆಗೂ ಹಲ್ಲಾ ಹತ್ತಿ ನಗಾರಿ ಬಡಿದೇಬಿಟ್ಟೆ'' ಎಂದು ಮಾತಿಗೆ ಪ್ರಾರಂಭಿಸಿದನು ಅವನ ಮಾತನ್ನು ಕೇಳ ಬೈರಣ್ಣನಿಗೆ ಚೇಳು ಕಡಿದಂತಾಯಿತು ಬೈರಣ್ಣನ ತಾಯಿಯು ಹಲವು ದಿನಗಳಿಂದಲೂ ಮಾಡುತ್ತಿದ್ದ ಬೋಧನೆಯೇ ಅದಕ್ಕೆ ಕಾರಣ ಅವಳು ತನ್ನ ಗಂಡನ ಕಾಲದ ಸುಖದ ದಿನಗಳನ್ನು ಮಗನೊಡನೆ ಹೇಳಿ, ಗಂಡನ ಸದ್ಗುಣಗಳನ್ನೂ ರಂಗೇಗೌಡನ ತಂದೆಗೂ ತನ್ನ ಗಂಡನಿಗೂ ಇದ್ದ ಪರಸ್ಪರ ಪ್ರೀತಿ ಮಮತೆಗಳನ್ನೂ ಬಣ್ಣಿಸಿ ಬಣ್ಣಿಸಿ, ಕಣ್ಣೀರು ಬಿಡುತ್ತಲೇ ಇದ್ದಳು ಅವರ ಹೊಲಕ್ಕೆ ಆಳುಗಳು ಬೇಕಾದರೆ ತಮ್ಮ ಆಳುಗಳನ್ನು ಕಳುಹಿಸುತ್ತಿದ್ದುದೂ, ತಮ್ಮ ಮನೆಯಲ್ಲಿ ಯಾವುದಾದರೂ ಸಾಮಾನು ಮುಗಿದುಹೋಗಿದ್ದರೆ ತನ್ನ ಗಂಡನು ಅವರ ಉಗ್ರಾಣಕ್ಕೆ ಹೋಗಿ ಹೇಳದೆ ಕೇಳದೆ ಅದನ್ನು ತೆಗೆದುಕೊಂಡು ಬರುತ್ತಿದ್ದುದೂ, ಅದನ್ನು ಕಂಡು ರಂಗೇಗೌಡನ ತಂದೆಯು ನಗುತ್ತ, "ಮಾಡಿದರೆ ಹಿಂಗೆ ಮಾಡಬೇಕು ಮನಸು ಮನಸು ಏಕವಾಗಿರೋವಾಗ ಹೇಳೋದು ಕೇಳೋದೇನು ಚಂದ? ಇದೇ ಸೈ, ಒಪ್ಪಿಕೊಂಡೆ ನಾನು'' ಎಂದು ಹೇಳುತ್ತಿದ್ದುದೂ, ಯಾರ ಮನೆಯಲ್ಲಿ ಮೊದಲು ಬಿಸಿಯಾಗಿ ಅಡಿಗೆಯಾದರೆ, ಅವರ ಮನೆಯಲ್ಲಿ ಎರಡು ಮನೆಗಳ ಮಕ್ಕಳಿಗೂ ಬಡಿಸುತ್ತಿದ್ದುದೂ, ಇಬ್ಬರ ಮನೆಯ ಬಳಕೆಗೂ ಸಾಕಾದಷ್ಟು ಮಜ್ಜಿಗೆಯನ್ನು ಇಟ್ಟುಕೊಂಡು ಉಳಿದುದನ್ನು ಒಟ್ಟಿಗೆ ಒಂದೇ ಗುಡಾಣಕ್ಕೆ ತುಂಬಿ, ಊರಿನಲ್ಲಿ ಕರಾವು ಇಲ್ಲದವರ ಮನೆಗೆ ಹಂಚಿ ಹಿಗ್ಗುತ್ತಿದ್ದುದೂ, ಈಗಿನವರು ಬಡತನದ ದೆಸೆಯಿಂದ ಮನೆಯವರಿಗೂ ಸಾಲದಂತೆ ಮಜ್ಜಿಗೆಯನ್ನಿಟ್ಟುಕೊಂಡು ಉಳಿದುದನ್ನು ಪೇಟೆಯಲ್ಲಿ ಮಾರಿಕೊಳ್ಳುತ್ತಿದ್ದುದನ್ನು ಆಗ ತಾವು ಸ್ವಪ್ನದಲ್ಲಿಯೂ ಕೇಳದೆ ಇದ್ದುದೂ, ಹಬ್ಬಗಳ ದಿನ ಒಬ್ಬರೊಬ್ಬರ ಮನೆಯಲ್ಲಿ ಒಂದೊಂದು ವಿಧದ ಒಳ್ಳೆಯ ಅಡಿಗೆಯನ್ನು ಮಾಡಿ ಎರಡು ಮನೆಯವರೂ ಒಟ್ಟಿಗೆ ಊಟಮಾಡುತ್ತಿದ್ದುದೂ ಇವೇ ಮುಂತಾದ ಸಂಗತಿಗಳನ್ನೆಲ್ಲ ಮುದುಕಿಯು ಮಗನಿಗೆ ತಿಳಿಯಹೇಳಿ, "ರಂಗೇಗೌಡನ್ನ ನಿಮ್ಮಪ್ಪ ಮಗನ ಹಂಗೇ ಕಾಣ್ತಾ ಇದ್ದರು, ನೀನು ಹಿಂಗೆ ಅವನೊಡನೆ ಹಗೆತನಾ ಮಾಡೋದು ಕಂಡಿದ್ರೆ ಅವರು ಭಾವೀಗೋ ಕೆರೇಗೋ, ಬಿದ್ದುಬಿಡೋರೋ

ಏನೋ! ಅವರು ಕಣ್ಣುಮುಚ್ಚಿ ಕೈಲಾಸಕ್ಕೆ ಹೋದಾಗ ನೀನಿನ್ನೂ ಹುಡುಗ, ಅವರ ಗುಣ ನೀನು ನೋಡ್ಲಿಲ್ಲ ನಿಮ್ಮ ವ್ಯಾಜ್ಯದಿಂದ ಆಸ್ತಿ ಯೆಲ್ಲ ಹಾಳುಬಿತ್ತು ಹಣಾನ ನೀರಿನ ಹಂಗೆ ಪೋಲುಮಾಡ್ತಾ ಇದ್ದೀಯ. ಈ ಹಣ ಧರ್ಮಕ್ಕಾರಾ ಕೊಟ್ಟಿದ್ರೆ?'' ಎಂದು ಬೋಧಿಸುತ್ತಿದ್ದಳು. ಇದರಿಂದ ತನ್ನ ಅವಿವೇಕವು ಅವನಿಗೆ ಚೆನ್ನಾಗಿ ಮುಂದಟ್ಟಾಗಿದ್ದುದರಿಂದ ಹಾಗೆ ಚೇಳು ಕಡಿದಂತಾಗಿ, ಅವನು ಮಾತನಾಡದೆ ಸುಮ್ಮನೆ ನಿಂತು ಬಿಟ್ಟಿದ್ದನು

ಹನುಮಂತೇಗೌಡನು ಪ್ರೀತಿಯಿಂದ ಅವನ ಬೆನ್ನನ್ನು ಸವರಿ, "ನೀನು ಯಾಕೋ ಏನೋ ಮುಖಾ ಚಿಕ್ಕದು ಮಾಡಿಕೊಂಡಿದ್ದೀಯಾ? ನಂಗೆ ಇದು ತಿಳೀದೆ ಹಂಗಂದೆ ವೆಸನ ಮನುಷ್ಯರಿಗೆ ಬರದೆ ಅರೇ ಬಂಡೆಗೆ ಬಂದಾತೆ? ನಿನಗೆ ಏನು ವೆಸನವೋ ನಂಗೆ ತಿಳೀದು ಧೈರ್ಯ ತಕ್ಕೋಬೇಕು ರಂಗೇಗೌಡನಿಗೆ ಸಜವೆಂತ ಊರೆಲ್ಲ ವರ್ತಮಾನ ಹುಟ್ಟಿದೆ ಆದರೆ ಅದು ಸುಳ್ಳು ಮೊಕದ್ದಮೆ'' ಎಂದು ಹೇಳಿದನು. ಬೈರಣ್ಣನು ಬೆರಗಾಗಿ ಅದು ಹೇಗೆಂದು ಕೇಳಿದನು ಬಳಿಕ, ಹನುಮಂತೇ ಗೌಡನು ತನ್ನ ಸಾಹಸದಿಂದ ನಿಜವನ್ನು ಕಂಡುಹಿಡಿದುದನ್ನು ತಿಳಿಯ ಹೇಳಲು ಪ್ರಾರಂಭಿಸಿದನು ರಂಗೇಗೌಡನೇ ಎತ್ತಿನ ಕಾಲನ್ನು ಮುರಿದಿರ ಬೇಕೆಂದು ತಾನು ಛೀಮಾರಿ ಮಾಡಿದುದು, ತಾನು ಮೂಲಿಕೆ ಸೊಪ್ಪನ್ನು ಹುಡುಕಲು ಹೋಗಿದ್ದಾಗ ಅವನು ಹೇಳಿದುದು ಅದು ಸುಳ್ಳೆಂದು ಭಾವಿಸಿ ಹನುಮಂತೇಗೌಡನು ಸುಮ್ಮನಾದುದು, ಕೆಲವು ದಿನಗಳ ಕೆಳಗೆ ಹನುಮಂತೇಗೌಡನು ನಾಯಿತುಲಸಿ ಸೊಪ್ಪಿಗಾಗಿ ಬೈರಣ್ಣನ ತೋಟಕ್ಕೆ ಹೋದುದು, ಅಲ್ಲಿ ಒಂದು ತರಗಿನ ಗುಡ್ಡೆಯನ್ನು ಕಂಡುದು, ಎತ್ತು ಕಾಲು ಮುರಿದು ಬಿದ್ದ ಸ್ಥಳಕ್ಕೆ ಅದು ಸಮೀಪದಲ್ಲಿದ್ದುದು, ಹಿಂದೆ ಅಲ್ಲಿ ಸಣ್ಣ ಹುತ್ತವೊಂದು ಇದ್ದುದು ಅವನಿಗೆ ಜ್ಞಾಪಕಕ್ಕೆ ಬಂದುದು, ಅವನು ಅದೆಲ್ಲ ಹೋಯಿತೆಂದು ಸುತ್ತಲೂ ನೋಡಿ ಕೊನೆಗೆ ಸಂಶಯ ಹುಟ್ಟಿ ತರಗನ್ನು ಓರೆಮಾಡಿ ನೋಡಿದುದು, ಆಗ ಹುತ್ತವನ್ನು ಕಂಡು ಅಂದಿ ನಿಂದಲೂ ಯೋಚಿಸುತ್ತಿದ್ದುದು, ಯಾರೋ ಎತ್ತನ್ನು ಓಡಿಸಿಕೊಂಡು

ಬಂದಿರಬೇಕೆಂದೂ, ಅದರ ಕಾಲು ಹುತ್ತದ ದೊಗರಿಗೆ ಸಿಕ್ಕಿ ಮುರಿದಿರಬೇಕೆಂದೂ, ಹಾಗೆ ಮಾಡಿದವನು ತನ್ನ ತಪ್ಪು ಮುಚ್ಚಲೆಂಬ ಭಾವನೆಯಿಂದ ಮಾವಿನ ಮರದ ಕೆಳಗೆ ಬಿದ್ದಿದ್ದ ತರಗೆಲೆಯನ್ನು ಗುಡ್ಡೆಮಾಡಿ ಹುತ್ತಕ್ಕೆ ಮುಚ್ಚಿ ಹೊರಟುಹೋಗಿರಬೇಕೆಂದೂ ನಿರ್ಧರಮಾಡಿದುದು; ಕೊನೆಗೆ ಅವನು ಬೈರಣ್ಣನ ತೋಟದ ಪಕ್ಕದ ತೋಟದವನ ಮಗನು ಆ ಕೆಲಸ ಮಾಡಿದುದನ್ನು ತಾನು ಪತ್ತೆಮಾಡಿದುದು—ಇವೇ ಮುಂತಾದ ಸಂಗತಿಗಳನ್ನೆಲ್ಲ ಹನುಮಂತೇಗೌಡನು ಬೈರಣ್ಣನಿಗೆ ತಿಳಿಸಿದನು ಬಳಿಕ "ಈ ಊರು ಪಟೇಲ ಕುಚೋದ್ಯಗಾರ, ಅವನು ಹೇಳಿದ್ದು ಸುಳ್ಳೋ ನಿಜವೋ ಕೇಳೋಣಾ ಅಂತ ಹೋಗ್ತಾ ಇದ್ದೀನಿ, ಅವರ ಗುಡಿಸಿಲ ಬಳಿಗೆ ಬೈರಣ್ಣ! ಧರ್ಮವನ್ನ ನಂಬಿ, ಈ ರಗಳೆ ಬಿಡು ಹರದಿಂದ ಬರೋದೇನು? ಹೀರಂಗು ದಿನ ಶಿಕ್ಷೆ ಆಗದೆ ಇವತ್ತೇ ಆಗಿರೋದು ಸುಳ್ಳಿದ್ದರೂ ಇರಬಹುದು ಯಾವುದೂ ವಿಚಾರಿಸಿ ರಾಜೀ ಮಾಡಿಕೊ ನಿಮ್ಮಪ್ಪನ ಹೆಸರು ಉಳಿಸು ಬೆನ್ನಮೇಲೆ ಹೊಡೆದೋರಿಗೂ ಬೆಣ್ಣೆಕೊಡೋ ಮನಸ ನಿಮ್ಮಪ್ಪ ಮುದುಕ ಬೊಗಳ್ತಾನೆ ಅಂದ್ಕೋಬೇಡ ಊರೋರೆಲ್ಲ ಸ್ನೇಹವಾಗಿರೋದನ್ನ ನೋಡಿ ನಾನು ಸತ್ತರೆ ನನಗೆ ಅದೇ ಸಾಕು, ಊರು ಯಜಮಾನನಾದ್ದಕ್ಕೆ ಸಾರ್ಥಕ ಪ್ರೀತಿ, ಗಿಣೀಹಂಗೆ. ದ್ವೇಷ, ಕೆಂಪು ಚೇಳಿನ ಹಂಗೆ" ಎಂದು ಹೇಳಿ ಹೊರಟುಹೋದನು ಬೈರಣ್ಣನಿಗೆ ತಾನು ಕುಲಕ್ಕೆ ಕಳಂಕವನ್ನು ತಂದವನೆನ್ನಿಸಿತು ಸುಳ್ಳುಮೊಕದ್ದಮೆಯೆಂಬುದನ್ನು ತಿಳಿಯದೆ ತಾನು ಮೋಸಹೋದುದಕ್ಕಾಗಿ ಅವನಿಗೆ ಬಹಳ ವ್ಯಥೆಯಾಯಿತು ಅವನು ಇನ್ನೆಂದೂ ಹಾಗೆ ದುಡುಕಬಾರದೆಂದು ದೇವರ ಮೇಲೆ ಆಣೆಯಿಟ್ಟು ತನ್ನ ಮನಸ್ಸಿನಲ್ಲಿ ದೃಢವಾಗಿ ಪ್ರತಿಜ್ಞೆಮಾಡಿಕೊಂಡನು ಇದಕ್ಕೆ ಮೊದಲೇ ಹನುಮಂತೇಗೌಡನು ಮೊಕದ್ದಮೆಯು ಸುಳ್ಳೆಂಬ ಸಂಗತಿಯನ್ನು ಅವನ ತಾಯಿಯ ಕಿವಿಗೂ ಹಾಕಿದ್ದನು ಮುದುಕಿಯು ಆ ಅನ್ಯಾಯವನ್ನು ಕೇಳಿ ಅತ್ತುಬಿಟ್ಟಳು

ಮುದುಕಿಯು ಅಷ್ಟಕ್ಕೇ ಸುಮ್ಮನಾಗಲಿಲ್ಲ, ರಂಗೇಗೌಡನ ಗುಡಿಸಿಲಿಗೆ ಹೋಗಿ, ಅಲ್ಲಿಲ್ಲರೂ ಅವಳನ್ನು ಕಂಡು ಅಸಡ್ಡೆ ತೋರಿದರೂ

ಅವಳು ಅದನ್ನು ಲಕ್ಷಿಸಲಿಲ್ಲ ಅವಳು ರಂಗೇಗೌಡನನ್ನು ಕುರಿತು, ಮಗಾ ! ಇದು ಸುಳ್ಳು ಮೊಕದ್ದಮೆ ಶಿಕ್ಷೆಯು ನಿಂಗಲ್ಲ ನಂಗೇ ಆದಹಂಗಾಯಿತು ಈ ಶಿಕ್ಷೆ ತಪ್ಪಿಸದೆ ಹೋದರೆ ನಾನು ಹೆಣ್ಣಲ್ಲ ನೂರೆಹಾಲಿಗೆ ನನ್ನ ಮಗ ಇದ್ದಿಲು ಪುಡಿ ಬೆರಸಿದರೆ ನಾನು ಸುಮ್ಮನಿದ್ದೇನಾ ? ಶಿಕ್ಷೆ ತಪ್ಪಿಸೋಕೆ ನನ್ನ ಕೈಲಾಗದೆ ಹೋದರೆ ನಾನು ನಮ್ಮೂರು ಕೆರೆಗೆ ಬಿದ್ದು ಪ್ರಾಣಾನೇ ಬಿಡ್ತೀನಿ ನನಗೆ ಬೈರನೂ ಒಂದೆ, ನೀನೂ ಒಂದೆ. ನಾನು ಅವತ್ತು ಮಾತಾಡಿಸಿದ್ರೂ ನೀನು ಮಾತಾಡ್ಲಿಲ್ಲ ನಾನು ನಿಂಗೇನು ಮಾಡಿದೆ ನನ್ನ ಮೇಲೆ ನಿನಗೇಕೆ ಮಗಾ, ಅಷ್ಟು ಸಿಟ್ಟು ? ” ಎಂದಳು ಇದನ್ನು ಕೇಳಿ ರಂಗೇಗೌಡನ ಮನಸ್ಸು ಕರಗಿಹೋಯಿತು ಅವನು ತನ್ನ ಮುಂದೆ ಅಳುತ್ತ ನಿಂತಿದ್ದ ಮುದುಕಿಯ ಕಾಲನ್ನು ಹಿಡಿದುಕೊಂಡು, “ಸತ್ತುಹೋಗಿದ್ದ ನಮ್ಮವ್ವ ಇವತ್ತು ಹುಟ್ಟಿ ಬಂದಹಂಗಾಯಿತು, ನನ್ನ ತಪ್ಪು ಮನಸ್ಸಿಗೆ ತಕ್ಕೋಬೇಡ ನೀನೇ ನಮ್ಮನ್ನ ಕಾಪಾಡೋ ಗ್ರಾಮ ದೇವತೆ ” ಎಂದು ಹೇಳಿದನು

ಅತ್ತ, ಅದೇ ಸಮಯದಲ್ಲಿ ಬೈರಣ್ಣನು ತನ್ನ ಗುಡಿಸಿಲಿಗೆ ಹೋದನು. ಅಲ್ಲಿ ಕಾಳಮ್ಮನು ಒಬ್ಬಳೇ ಇದ್ದಳು ಬೈರಣ್ಣನು, ತನ್ನನ್ನು ನೆರೆಯ ಹಳ್ಳಿಯಲ್ಲಿ ಔತಣದ ಊಟಕ್ಕೆ ಕರೆದಿರುತ್ತಾರೆಂದೂ, ಮನೆಯಲ್ಲಿ ಯಾರೂ ಕಾಯಕೂಡದೆಂದೂ, ಹೇಳಿ ಹೊರಟುಹೋದನು ಔತಣದ ಸಂಗತಿಯು ಬರಿಯ ನೆಪವೇ ಹೊರತು ನಿಶ್ಚಯವಲ್ಲ ಏಕೆಂದರೆ ಬೈರಣ್ಣನಿಗೆ ಊಟಬೇಕಾಗಿರಲಿಲ್ಲ, ಅಲ್ಲದೆ ತಾಯಿಗೆ ಮುಖವನ್ನು ತೋರಿಸುವುದಕ್ಕೆ ಅವನಿಗೆ ಹೀನಾಯ ಆದುದರಿಂದ, ಅವನು ರಾತ್ರಿ ಎಲ್ಲೆಲ್ಲಿಯೂ ಸದ್ದಡಗಿ, ಗುಡಿಸಿಲುಗಳ ದೀಪಗಳೆಲ್ಲ ಆರುವವರೆಗೂ ಹಿಂದಕ್ಕೆ ಬರಲಿಲ್ಲ, ಹುಚ್ಚನ ಹಾಗೆ ಎಲ್ಲೆಲ್ಲಿಯೋ ಅಲೆದಾಡುತ್ತಿದ್ದು, ಕಾಲು ಸೋತಮೇಲೆ ಮನೆಗೆ ಹಿಂದಿರುಗಿದನು ಕಾಳಮ್ಮನು ಗುಡಿಸಿಲಿನ ತಡಿಕೆಯನ್ನು ಎಂದಿನಂತೆ ಸುಮ್ಮನೆ ಮುಚ್ಚಿದ್ದಳು ಬೈರಣ್ಣನು ಸದ್ದುಮಾಡದೆ ಒಳಕ್ಕೆ ಹೋಗಿ, ಕೈಗೆ ಸಿಕ್ಕಿದ ಒಂದು ಬೊಂತೆಯನ್ನು ತಲೆಯ ಕೆಳಗಿಟ್ಟು ಒಂದು ಮೂಲೆಯಲ್ಲಿ ಚಾಪೆಯಮೇಲೆ ಮಲಗಿದನು ರಂಗೇಗೌಡನು ಅಂದು ತನ್ನ

ಗುಡಿಸಿಲಿಗೆ ಬೆಂಕಿ ಹಾಕಬಹುದೆಂದೂ, ಆಗ ತಾನು ಅವನನ್ನು ಹಿಡಿದು ಅವನ ಅಪರಾಧವನ್ನು ಮನ್ನಿಸಿ ಅವನೊಡನೆ ಸ್ನೇಹಮಾಡಿಕೊಳ್ಳ ಬೇಕೆಂದೂ ಅದುವರೆಗೂ ತಮ್ಮ ತಾಯಿಗೂ ಹನುಮಂತೇಗೌಡನಿಗೂ ಮುಖವನ್ನು ತೋರಿಸಬಾರದೆಂದೂ ಅವನು ಮನಸ್ಸಿನಲ್ಲಿ ಗೊತ್ತುಮಾಡಿ ಕೊಂಡಿದ್ದನು ಆ ರಾತ್ರಿ ಅವನಿಗೆ ಊಟವಿಲ್ಲದೆ ಇದ್ದುದೊಂದುಕಡೆ, ಸುತ್ತಿಸುತ್ತಿ ಸಾಕಾಗಿದ್ದುದೊಂದುಕಡೆ—ಇವೆರಡೂ ಸೇರಿ ಅವನಿಗೆ ನಿದ್ದೆ ಹತ್ತುವ ಹಾಗ ತೋರಿತು ಆದರೂ ಪೂರ್ತಿಯಾಗಿ ನಿದ್ದೆಗೆ ಅವಕಾಶ ಕೊಡದೆ ಎಚ್ಚರವಾಗಿರಲು ಹೋರಾಡುತ್ತಿದ್ದನು ಸ್ವಲ್ಪ ಎಚ್ಚರ, ಸ್ವಲ್ಪ ನಿದ್ದೆ, ಮತ್ತೆ ಎಚ್ಚರ, ಹೀಗೆ ಸ್ವಲ್ಪ ಕಾಲ ಕಳೆಯಿತು ಅವನು ಬಂದು ಮಲಗಿದಾಗ ಪಕ್ಕದ ಗುಡಿಸಿಲಿನವರು ಇನ್ನೂ ಎಚ್ಚರವಾಗಿದ್ದರು ರಾತ್ರಿ ಬಹಳ ಹೊತ್ತಿನಮೇಲೆ ಅವರ ನಂಟರು ಬಂದುದರಿಂದ ಅಲ್ಲಿ ಮತ್ತೆ ಅಡಿಗೆ ಯಾಗುತ್ತಿದ್ದಿತು ಬೈರಣ್ಣನು ಎಷ್ಟು ಹೆಣಗಿದರೂ ನಿದ್ದೆ ಅವನನ್ನು ಬಿಡಲಿಲ್ಲ

ಅವನು ಸ್ವಲ್ಪ ಹೊತ್ತು ನಿದ್ದೆಮಾಡಿರಬಹುದು, ಕೊನೆಗೆ ಹಸಿವಿನ ಬಾಧೆಯಿಂದ ಅವನಿಗೆ ಎಚ್ಚರವಾಯಿತು ಗುಡಿಸಿಲಿನ ಚಾಪೆಯ ಸಂದಿ ಯಿಂದ ಹೊರಗೆ ಉರಿಯು ಕಂಡಿತು ತಾನು ನಿದ್ದೆಮಾಡಿದುದು ಅವಿವೇಕ ವಾಯಿತೆಂದು ಬೈರಣ್ಣನು ಸರಕ್ಕನೆ ಎದ್ದುಬಂದು ಕಣ್ಣನ್ನು ಉಜ್ಜಿಕೊಳ್ಳು ತ್ತಿದ್ದನು, ನಿದ್ದೆಯ ಜೋಂಪು ಇನ್ನೂ ಹರಿದಿರಲಿಲ್ಲ ಆ ಸಮಯಕ್ಕೆ ಏನೋ ದಡದಡನೆ ಓಡಿಹೋದ ಹಾಗಾಗಲು, ಅವನು ಚೆನ್ನಾಗಿ ಕಣ್ದೆರೆದು ನೋಡಿದನು ಒಂದು ಅವರೆಯ ಒಣಗಿಡವು ಉರಿಯುತ್ತಿದ್ದಿತು; ಅದರ ಸಮೀಪದಲ್ಲಿ ಒಂದು ಹುಲ್ಲಿನ ಮೆದೆ, ಅದರ ಪಕ್ಕದಲ್ಲಿ ಬೈರಣ್ಣನ ಗುಡಿಸಿಲು ಬೈರಣ್ಣನು ಸುಲಭವಾಗಿ ಉರಿಯನ್ನು ಆರಿಸಬಹುದಾಗಿದ್ದಿತು. ಆದರೆ ಅವನು ರಂಗೇಗೌಡನನ್ನು ಹಿಡಿಯಬೇಕೆಂಬ ಕುತೂಹಲವುಳ್ಳವ ನಾಗಿದ್ದುದರಿಂದ, ಅಲ್ಲಿದ್ದ ಒಂದು ಮೊಣ್ಣೆಯನ್ನು ಕೈಯ್ಯಲ್ಲಿ ಹಿಡಿದು, ಓಡಿ ಹೋದ ಸದ್ದು ಕೇಳಿಸಿದ ಕಡೆಗೆ ತಾನೂ ಓಡತೊಡಗಿದನು ಲಾಂಟಾನಾ ಮುಳ್ಳು ಹೆಚ್ಚಾಗಿ ಬೇಲಿಯು ಅವನಿಗೆ ಅಡ್ಡವಾಗಿ ಸಿಕ್ಕಿತು. ಅದರ ಆಚೆ

ಓಡಾಟದ ಶಬ್ದವು ಕೇಳಿಸಿತು "ಸಿಕ್ಕಿದೆಯಾ, ಸಿಕ್ಕಿದೆಯಾ!" ಎಂದು ಕೂಗಿಕೊಂಡು, ನಿದ್ದೆಯ ಮೊಬ್ಬಿನಲ್ಲಿ ಅವಸರವಸರವಾಗಿ ಅವನು ಹೇಗೋ ಬೇಲಿಯ ಸಂದಿಯಲ್ಲಿ ನುಸಿದುಕೊಂಡು ಮುಂದೆ ಹೋದನು ಅಲ್ಲಿ ನೋಡಿದರೆ, ಒಂದು ನರಿಯನ್ನು ಓಡಿಸಿಕೊಂಡು ಹೋಗಿದ್ದ ಬೈರಣ್ಣನ ನಾಯಿ ನರಿಯು ತಪ್ಪಿಸಿಕೊಂಡು ಹೋಯಿತು ರಂಗೇಗೌಡನು ತಪ್ಪಿಸಿಕೊಳ್ಳುವುದಕ್ಕೆ ಈ ಹಾಳು ನಾಯಿ ಅವಕಾಶ ಕೊಟ್ಟಿತೆಂದು ಬಗೆದು, ಬೈರಣ್ಣನು ಕೋಲಿನಿಂದ ಅದಕ್ಕೊಂದು ಪೆಟ್ಟನ್ನು ಕೊಟ್ಟನು ಅದು ರೋದನಮಾಡುತ್ತ ಸ್ವಲ್ಪ ದೂರ ಹೋಗಿ ಮತ್ತೆ ಹಿಂದಕ್ಕೆ ಬಂದು ಅವನ ಕಾಲಿಗೆರಗಿತು ಸಂಜೆಯಿಂದಲೂ ನೊಂದಿದ್ದ ಅವನ ಮನಸ್ಸು ಇದರಿಂದ ಕರಗಿ ನೀರಾಯಿತು ನಾಯಿಯೂ ತನಗೆ ಬುದ್ಧಿಯನ್ನು ಕಲಿಸಿತೆಂದು ಯೋಚಿಸಿಕೊಂಡು, ತಾನು ಅದನ್ನು ಹೊಡೆದುದಕ್ಕಾಗಿ ಪಶ್ಚಾತ್ತಾಪಪಟ್ಟು, ಅವನು ಅದನ್ನು ಮೈದಡವಿದನು ಅದು ನೋವನ್ನು ಮರೆತು, ತನ್ನ ಹಿಂಗಾಲ ಮೇಲೆ ನಿಂತು, ಮುಂಗಾಲನ್ನು ಬೈರಣ್ಣನ ಮಂಡಿಯ ಮೇಲಕ್ಕೆ ಹಾರಿಸಿ, ತನ್ನ ಪ್ರೀತಿಯನ್ನು ತೋರಿಸಿತು ಬೈರಣ್ಣನ ಕಣ್ಣಿನಿಂದ ನೀರು ಬಂದುದು ನಾಯಿಗೆ ತಿಳಿಯಲಿಲ್ಲ

ಅಂತು, ಬೈರಣ್ಣನ ಉದ್ದೇಶವೇನೊ ನೆರವೇರಲಿಲ್ಲ ಅವನು ತನ್ನ ಗುಡಿಸಿಲಿನ ಹತ್ತಿರಕ್ಕೆ ಓಡಿಬರುವುದರೊಳಗಾಗಿ ಅವರೆಯ ಗಿಡದ ಉರಿಯು ಹುಲ್ಲಿಗೆ ವ್ಯಾಪಿಸಿ, ಗುಡಿಸಲು ಹೊತ್ತಿಕೊಂಡಿದ್ದಿತು ಕಾಳಮ್ಮನೂ ಅವಳ ಅತ್ತೆಯೂ ಹೊರಗೆ ಬಂದು ನಿಂತು, "ಹೋ" ಎಂದು ಮೊರೆಯಿಡುತ್ತ ನೆರೆಹೊರೆಯವರನ್ನು ಕೂಗುತ್ತಿದ್ದರು ಎಲ್ಲರೂ ಗಾಬರಿಪಟ್ಟು ಓಡಿಬಂದು ಅಲ್ಲಿ ಗುಂಪುಕೂಡಿದ್ದರು; ಒಬ್ಬೊಬ್ಬರಾಗಿ ಒಳಗೆ ನುಗ್ಗಿ ಅಲ್ಲಿದ್ದ ಸಾಮಾನುಗಳನ್ನು ಕೆಲವರು ಸಾಗಿಸುತ್ತಿದ್ದರು; ಕೆಲವರು ನೀರನ್ನೂ ಮಣ್ಣನ್ನೂ ಗುಡಿಸಿಲ ಮೇಲೆ ಎರಚುತ್ತಿದ್ದರು. ಆ ವೇಳೆಗೆ ಸರಿಯಾಗಿ ಅಲ್ಲಿಗೆ ಓಡಿಬಂದ ಬೈರಣ್ಣನು ಆ ಸಹಾಯಕರಲ್ಲಿ ರಂಗೇಗೌಡನನ್ನೂ ಕಂಡು ರೋಷದಿಂದ ಉರಿದುಬಿದ್ದನು ಅವನು ರಂಗೇಗೌಡನ ವಿಷಯವಾಗಿ ಮೊದಲು ನಿರ್ಧರಮಾಡಿಕೊಂಡಿದ್ದುದು ಎಲ್ಲಿಯೋ ಹಾರಿಹೋಯಿತು. ರಂಗೇಗೌಡನು

ಬೂಟಾಟಿಕನೆಂಬ ಭಾವನೆಯುಂಟಾದುದೇ ಅದಕ್ಕೆ ಕಾರಣ ಅವನು ರಂಗೇಗೌಡನನ್ನು ಕುರಿತು, "ಸಂಜೆ ನನ್ನ ಕೈಲಿ ಹೇಳಿದಂತೆ ಬೆಂಕಿಯಿಟ್ಟು ಮರಳೀ ಹಂಗೆ ಈಗ ಸಾಮಾನು ತೆಗೆದೀಯಾ?" ಎಂದು ಹೇಳಿ ದೊಣ್ಣೆಯ ನ್ನೆತ್ತಿದನು ಅವನ ತಾಯಿಯು ಮಿಂಚಿನ ವೇಗದಲ್ಲಿ ಬಂದು ಅಡ್ಡವಾಗಿ ನಿಂತು, "ಹೊಡೆದರೆ ನನ್ನ ಹೊಡಿ, ಮನೆ ಹಾಳ!" ಎನ್ನುವಷ್ಟರಲ್ಲಿಯೇ ಅವಳ ತಲೆಗೆ ಪೆಟ್ಟು ಬಿದ್ದು ಹೋಯಿತು ಬೈರಣ್ಣನು, "ಅಯ್ಯೋ" ಎಂದು ಕನಿಕರ ಸ್ವರದಿಂದ ಕೂಗಿದನು ಆ ವೇಳೆಗೆ ಗುಡಿಸಿಲಿನ ಉರಿ ಯನ್ನೂ ಎಲ್ಲರೂ ಸೇರಿ ಆರಿಸಿದ್ದರು ಕೆಲವು ಮಂದಿ ರೈತರು ಮರುದಿನ ಕಣವನ್ನು ಸಾರಿಸುವುದಕ್ಕೆಂದು ಗುಡಾಣಗಳಲ್ಲಿಯೂ ಕೊಪ್ಪರಿಗೆಗಳಲ್ಲಿಯೂ, ನೀರನ್ನು ತುಂಬಿಟ್ಟುಕೊಂಡಿದ್ದುದರಿಂದ ಹೆಚ್ಚು ಅನರ್ಥವಾಗುವುದಕ್ಕೆ ಮೊದಲೇ ರೈತರೆಲ್ಲರೂ ಒಟ್ಟುಗೂಡಿ ಉರಿಯನ್ನು ಆರಿಸಿದರು ಆದುದರಿಂದ ಹೆಚ್ಚು ನಷ್ಟವೇನೂ ಸಂಭವಿಸಲಿಲ್ಲ ಬೈರಣ್ಣನ ತಾಯಿಯ ತಲೆಯಮೇಲೆ ಗಾಯವಾಗಿ ರಕ್ತವು ಬಂದಿತು ರೈತರು ಹಲ್ಲುಪುಡಿಯನ್ನೂ ಕುಂಕುಮ ವನ್ನೂ ಅದಕ್ಕೆ ತುಂಬಿ ಕಂಬಳಿ ಹಾಸಿ ಅವಳನ್ನು ಮಲಗಿಸಿದರು ಪಾಪ! ಮುದುಕಿಯಾಗಿದ್ದ ಅವಳಿಗೆ ಬಹಳ ನೋವಾಯಿತು ಆದರೂ ಅವಳು ಅದನ್ನು ಸೈರಿಸಿಕೊಂಡು, "ಇನ್ನೊಬ್ಬರಿಗೆ ಎರಡು ಬಗೆದರೆ ಆಗೋದೇ ಹಿಂಗೆ ಹಿಂದಕ್ಕೆ ಕುಮಾರಸಾಮಿ ಬಂದು ಬೆಕ್ಕಿನ ತಲೇಮೇಲೆ ಹೊಡೆ ದ್ದಕ್ಕೆ ಪಾರ್ವತಾ ಅಮ್ಮನೋರ ತಲೆ ಜೋರೆ ಹೋಗಿತ್ತಂತೆ ನಂಗೂ ಇವತ್ತು ಹಂಗೇ ಆದಂಗೇ ಆಯಿತು" ಎಂದು ಕಣ್ಣೀರು ಸುರಿಸಿದಳು ಬೈರಣ್ಣನಿಗೆ ತನ್ನನ್ನು ಭರ್ಜಿಯಿಂದ ತಿವಿದಂತಾಯಿತು

ಮುದುಕಿಯ ತಲೆಯ ಗಾಯವು ಬಹಳ ತೊಂದರೆ ಕೊಟ್ಟಿತು ಅವಳ ಬೋಧನೆಯಿಂದ ನಮ್ಮ ಕಾಳಿಗದ ಆಳುಗಳಿಬ್ಬರೂ ಸಂಧಿಗೆ ಒಡಂಬಟ್ಟರು ರಂಗೇಗೌಡನು ಬೆಂಕಿಯನ್ನು ಹೊತ್ತಿಸಿದವನಲ್ಲ ರಾತ್ರಿ ಹೊತ್ತಾದಮೇಲೆ ಅಡಿಗೆ ಮಾಡಿದ ನೆರೆಯ ಗುಡಿಸಿಲಿನವರು ಇಷ್ಟು ಹಗ ರಣಕ್ಕೂ ಕಾರಣವಾದರು ಯಜಮಾನಿಯು ಒಲೆಯಲ್ಲಿ ಬೆಂಕಿಯಿದ್ದರೆ ಗುಡಿಸಿಲು ಹೊತ್ತಿಕೊಂಡೀತೆಂದು ಭಯಪಟ್ಟು, ನಿದ್ದೆಯು ಪೀಡಿಸುತ್ತಿದ್ದುದ

ರಿಂದ, ದೂರವಾಗಿ ಹೋಗಲೊಲ್ಲದೆ, ಆ ಗುಡಿಸಿಲಿನ ಅವರೆಯ ಗಿಡದ ಕೆಳಗೆ ಬೆಂಕಿಯನ್ನು ಸುರಿದು, ಈ ರಗಳೆಯನ್ನು ತಂದಿಟ್ಟಳು ಈ ವಿಷಯವು ಗೊತ್ತಾದ ಮೇಲಂತು, ಬೈರಣ್ಣನು ಕುಸಿದುಬಿದ್ದುಹೋದನು ಮುದುಕಿಯೂ ಹನುಮಂತೇಗೌಡನೂ ನೀತಿಬೋಧೆ ಮಾಡಿ ಅವರಿಬ್ಬರಿಗೂ ಇದ್ದ ದ್ವೇಷದ ಹುಟ್ಟನ್ನೇ ಅಡಗಿಸಿದರು ಆದರೂ, ಮೊದಲೇ ತಕ್ಕ ಸಮಯದಲ್ಲಿ ಮುಚ್ಚದೆ ಹೋದ ಮೋಳೆಯು ಕೆರೆಗೆ ಅಪಾಯನಾಗುವಂತೆ, ಇವರ ದ್ವೇಷವೂ ಪರಿಣಮಿಸಿತು "ಆರೋಗ್ಯಮೆಂಟಿನ" ತಾರೀಖಿನ ದಿನ ಎತ್ತಿನ ಮೊಕದ್ದಮೆಯಲ್ಲಿ ಗೌಡರಿಬ್ಬರೂ ರಾಜಿ ಮಾಡಿಕೊಳ್ಳಬೇಕೆಂದು ಹುಮ್ಮಸ್ಸಿನಿಂದ ನ್ಯಾಯಸ್ಥಾನಕ್ಕೆ ಹೋದರು ಆದರೆ ಅದು ವಾದಿ ಪ್ರತಿವಾದಿಗಳು ಸಮಾಧಾನ ಮಾಡಿಕೊಳ್ಳಬಹುದಾದ ಮೊಕದ್ದಮೆಯಲ್ಲವೆಂದು ತಿಳಿಯಿತು ಮೊಕದ್ದಮೆಯು ಕೆಟ್ಟುಹೋದರೆ ಸಾಕೆಂದು ಬೈರಣ್ಣನ ಬಯಕೆ ಅದೂ ನೆರವೇರಿತು ಸಾಕ್ಷ್ಯವು ಸಾಲದೆ ಮೊಕದ್ದಮೆಯು ವಜಾ ಆಯಿತು ಆಗ ಬೈರಣ್ಣನ ಆನಂದಕ್ಕೆ ಪಾರವೇ ಇಲ್ಲ ಸ್ವಲ್ಪ ಕಾಲದಲ್ಲೇ ಮುದುಕಿಯ ತಲೆಯ ಗಾಯವು ವಾಸಿಯಾಯಿತು ಬಳಿಕ ರಂಗೇಗೌಡನೂ ಬೈರಣ್ಣನೂ ಇಬ್ಬರೂ ಸೇರಿ ತಮ್ಮ ತೋಟಗಳಲ್ಲಿ ಊರಿನವರೆಲ್ಲರಿಗೂ ಕುಲದ ಊಟಕ್ಕೆ ಏರ್ಪಾಡು ಮಾಡಿ, ಬೈರಣ್ಣನ ತಂಗಿಯನ್ನೂ ಅವಳ ಗಂಡನನ್ನೂ ಕರೆಯಿಸಿದರು ತೋಟಗಳ ಮಧ್ಯದಲ್ಲಿದ್ದ ಮುಳ್ಳು ಬೇಲಿಯನ್ನು ಕಿತ್ತೊಗೆದು ಅದರ ಗುರುತೇ ಇಲ್ಲದಂತೆ ಮಾಡಿ, ಎರಡು ತೋಟಗಳನ್ನೂ ಹೀಗೆ ಒಟ್ಟುಗೂಡಿಸಿದರು ಈ ಔತಣದ ದಿನ ಹನುಮಂತೇಗೌಡನ ಓಡಾಟವೇ ಓಡಾಟ ರಂಗೇಗೌಡನೂ ಬೈರಣ್ಣನೂ ತಮ್ಮ ಮನಸ್ಸಿನ ಬೇಲಿಗಳನ್ನೂ ಕಿತ್ತೆಸೆದುದರಿಂದ, ಇವಕ್ಕೆಲ್ಲ ಮಾರ್ಗವಾಗಿ, ಊರಿಗೂ ಕ್ಷೇಮವಾಗಿ, ಅವರ ಏಳಿಗೆಗೂ ಕಾರಣವಾಯಿತೆಂದು ಹನುಮಂತೇಗೌಡನು ಹಿಗ್ಗಿದನು ದಡಿಮೀಸೆಯ ಧನಕೋಟಿ ಗೌಡನೂ ಆಗತಾನೆ ಊಟಮಾಡಿದವನು ಕೈಯಿಂದ ಹೊಟ್ಟೆಯನ್ನು ಸವರಿಕೊಳ್ಳುತ್ತ, "ನಮ್ಮೂರಿನ ಶನಿ ಇವತ್ತಿಗೆ ಬಿಡುಗಡೆಯಾಯಿತಪ್ಪಾ! ನಮಗೆ ಅದೇ ಸಂತೋಷ" ಎಂದು ಹೇಳುತ್ತಿರುವಾಗಲೇ, ದೊಡ್ಡದಾಗಿ ಆಕಳಿಸಿದನು

ಹುಡುಗರೆಲ್ಲರೂ ನಕ್ಕರು ಅಂದು ಎಲ್ಲಿ ನೋಡಿದರೂ ನಗುವೇ ಔತಣದ ಸಡಗರವು ಮುಗಿದಮೇಲೆ ರಂಗೇಗೌಡನು ಬೈರಣ್ಣನ ತಾಯಿಯ ಬಳಿಗೆ ಬಂದು, "ಚಿಕ್ಕವ್ವಾ! ಇನ್ನುಮುಂದೆ ನೀನೇ ಕುಲದೇವತೆ ಇಷ್ಟು ದಿನವೂ ನಿನಗೆ ಬೈರಣ್ಣನೊಬ್ಬನೇ ಮಗನಾಗಿದ್ದ, ಇವತ್ತಿನಿಂದ ನಿನಗೆ ಇಬ್ಬರು ಗಂಡುಮಕ್ಕಳು" ಎಂದು ಹೇಳಿ ಅಡ್ಡಬಿದ್ದನು, ಬೈರಣ್ಣನೂ ಅಡ್ಡಬಿದ್ದನು ಅವನ ತುಟಿಗಳು ನಡುಗುತ್ತಿದ್ದುವು, ಕಣ್ಣಿನಲ್ಲಿ ನೀರು ತುಂಬಿದ್ದಿತು ಅವನ ತಾಯಿಯು ಇಬ್ಬರ ತಲೆಯಮೇಲೂ ಕೈಯಿಟ್ಟು, "ಏಳಿ ಹುಚ್ಚು ಮರುವಗಳಾ! ಏಳಿ! ದೊಡ್ಡಗೌಡರುಗಳು ಇಬ್ಬರೂ ನಕ್ಷತ್ರಗಳಾಗೇ ಅವರೆ, ನಮಗೆ ಇಂಥಾ ನಕ್ಷತ್ರಗಳೆಂದು ತೋರಿನಾಕೇನೂ ಆಗೋಕಿಲ್ಲ ಆದರೂ, ನಕ್ಷತ್ರಗಳಾಗಿ ಅವರಿಬ್ಬರೂ ನಿಮ್ಮನ್ನ ನೋಡ್ತಾ ಅವರೆ ದೇವರು ನಿಮ್ಮಿಬ್ಬರ ಹೊಟ್ಟೇನೂ ಧಣ್ಣಗೆ ಮಡಗಿರಲಿ! ಇಬ್ಬರಲ್ಲಿ ಯಾರು ಹೆಚ್ಚು ಯಾರು ಕಡಿಮೆ ಅನ್ನೋ ಹಂಗೇ ಇಲ್ಲ ಏಳಿ, ನನ್ನ ಹಾಲು ಬಂಗಾರಗಳಾ! ಏಳಿ!" ಎಂದಳು, ಬೈರಣ್ಣನು ತಮ್ಮ ತಾಯಿಯೊಡನೆ, "ಅವ್ವಾ! ನನಗೆ ಜನ್ಮಜನ್ಮಾಂತರಕ್ಕೂ ನೀನೇ ತಾಯಿಯಾಗೋ ಹಂಗೆ ದೇವರು ಕಣ್ಣುಬಿಟ್ಟು ನೋಡಿದರ ಸಾಕು, ನಂಗೆ ಇನ್ನೊಂದೂ ಬೇಡ" ಎಂದನು ಅದಕ್ಕೆ ಅವಳು, 'ನನ್ನ ಮನಸ್ಸಿನಾಗೂ ಎಷ್ಟೋ ದಿನದಿಂದ ಹಿಂಗೇ ಅದೆ ದೇವರು ದೊಡ್ಡೋನು ನಮ್ಮ ಬೇಡಿಕೆ ನಡಿಸಿಯೇ ಕೊಡ್ತಾನೆ" ಎಂದಳು ಆ ವೇಳೆಗೆ ಸರಿಯಾಗಿ ಚಂದ್ರನಿಗೆ ಮುಚ್ಚಿದ್ದ ಮೋಡವು ಓರೆಯಾಗಿ, ಎಲ್ಲರ ಕಣ್ಣಿಗೂ ಹಾಲರಚಿದಂತಾಯಿತು, ಎಲ್ಲ ಪ್ರದೇಶಗಳನ್ನೂ ಬೆಳ್ಳಿಯ ರಸದಲ್ಲಿ ಅದ್ದಿದಹಾಗಾಯಿತು ಸ್ವಾಮಿಯು ಅವಳ ಪ್ರಾರ್ಥನೆಯನ್ನು ಲಾಲಿಸಿದನೆಂಬುದನ್ನು ಸೂಚಿಸಲು ಹೀಗಾಗಿರಬಹುದೆ? ಅದನ್ನು ಹೇಳಬಲ್ಲವರಾರು?

—o—

# ಪ್ರಾಯಶ್ಚಿತ್ತ

—o—

ಅಂದು ನಮ್ಮ ಊರಿನಲ್ಲಿ ಎಲ್ಲಿ ನೋಡಿದರೂ ವ್ಯಾಕ್ಯಾರ್ಥಗಳ ಮೇಲೆ ವಾಕ್ಯಾರ್ಥಗಳು ಚರ್ಚೆಯಮೇಲೆ ಚರ್ಚೆಗಳು ಮರುದಿವಸ ಸ್ವಾಮಿಗಳ ಸವಾರಿಯು ಚಿತ್ತೈಸುವುದಾಗಿದ್ದಿತೆಂದಮೇಲೆ ಸಾಮಾನ್ಯವೆ? ಸ್ವಾಮಿಗಳವರ ಆಗಮನದ ವಿಚಾರದಲ್ಲಿ ಒಬ್ಬೊಬ್ಬರಿಗೆ ಒಂದೊಂದು ವಿಧದ ಸಂತೋಷ ವೈದಿಕರಿಗೆ ತಾವು ತಮಗೆ ಬರುವಷ್ಟು ವೇದಮಂತ್ರಗಳನ್ನೇ ಸರಿಯಾಗಿ ಉಪಯೋಗಿಸಿ ಶಾಲುಜೋಡಿಗಳನ್ನು ಪಡೆಯಬೇಕೆಂಬ ಆಸೆಯಿಂದ ಹುಟ್ಟಿದ ಸಂತೋಷ ಕೆಲವು ಮಂದಿ ಲೌಕಿಕರಿಗೆ ಸ್ವಾಮಿಗಳವರನ್ನು ಸತ್ಕರಿಸುವ ಸಮಾರಂಭದಲ್ಲಿ ವಿಶೇಷ ಲವಲವಿಕೆಯಿಂದ ಓಡಾಡಿ, ಯಶಸ್ವಿಗಳಾಗಬೇಕೆಂಬ ಕುತೂಹಲದಿಂದ ಹುಟ್ಟಿದ ಸಂತೋಷ, ಹೆಂಗಸರಿಗೆ ಸ್ವಾಮಿಗಳು ಬಂದಾಗ ಅಡಿಗೆಯ ರಗಳೆಯು ತಪ್ಪುವುದೆಂಬ ನಿರೀಕ್ಷಣೆಯಿಂದ ಹುಟ್ಟಿದ ಸಂತೋಷ ಹುಡುಗರ ಮಾತನ್ನಂತು ಹೇಳಬೇಕಾದುದೇ ಇಲ್ಲ. ಅವರೊಬ್ಬರೂ ಆನೆಯನ್ನು ನೋಡಿರಲಿಲ್ಲ; ಸ್ವಾಮಿಗಳು ಬಂದರೆ ಆನೆಯನ್ನು ನೋಡಬಹುದೆಂಬ ಆಸೆಯಿಂದ ಅವರಿಗೆ ಆನಂದ ಅವರಲ್ಲಿ ಕೆಲವರಂತು, ತಾವು ಮುಂದೆ ನಿಂತು ಆನೆಯನ್ನು ನೋಡಬೇಕೆಂದೂ, ಹಿಂದಿದ್ದವರಿಗೆ ಆನೆಯು ಕಾಣದಂತ ಮಾಡಬೇಕೆಂದೂ ಸಂಕಲ್ಪ ಮಾಡಿಬಿಟ್ಟರು ಆನೆಯು ಎಲ್ಲರಿಗೂ ಕಾಣುವಷ್ಟು ದೊಡ್ಡ ಪ್ರಾಣಿಯೆಂಬುದು ಅವರಿಗೆ ತೋರಲಿಲ್ಲ

ಇತರರೆಲ್ಲರ ಸಂತೋಷವೇ ಒಂದು ತೂಕವಾದರೆ ನಮ್ಮ ಊರಿನ ತೀಪೂಭಟ್ಟರ ಸಂತೋಷವೇ ಒಂದು ತೂಕ. ಸ್ವಾಮಿಗಳಿಗೆ ಪಾದಪೂಜೆಯಾಗುವ ಸಮಯದಲ್ಲಿ ನಮ್ಮ ಊರಿನ ಸೀಬೆಯಹಣ್ಣಿನ ಶಾಸ್ತ್ರಿಗಳ ಅನಾಚಾರವನ್ನೂ ಪಾತಕವನ್ನೂ ಸ್ವಾಮಿಗಳಿಗೆ ಬಿನ್ನವಿಸಿ, ಅವರಿಗೆ ಬಹಿಷ್ಕಾರ

ವನ್ನು ಹಾಕಿಸುವೆನೆಂಬ ಆನಂದದಲ್ಲಿ ಅವರು ವ್ಯವಹರಿಸುತ್ತಿದ್ದರು ತಾವು ಕೈಕೊಳ್ಳಬೇಕೆಂದಿದ್ದ ಮಹತ್ಕಾರ್ಯಕ್ಕೆ ತಕ್ಕಂತೆ ಶುಭ್ರವಾದ ಮಡಿಯನ್ನುಟ್ಟು ರೀವಿಯಿಂದ ಸ್ವಾಮಿಗಳವರ ಸನ್ನಿಧಾನಕ್ಕೆ ಹೋಗಬೇಕೆಂಬುದು ಅವರ ಆಸೆ ಆದಕಾರಣ, ಅವರು ಬಹಳ ಶ್ರಮಪಟ್ಟು ಪಂಚೆಗಳನ್ನು ಒಗೆಯತೊಡಗಿದರು ಬಿಸಿನೀರಿನಲ್ಲಿ ನೆನೆದು ನೆನೆದು ಮಾಸಲು ಬಣ್ಣಕ್ಕೆ ತಿರುಗಿದ್ದ ಅವರ ಪಂಚೆಗಳು ಎಷ್ಟು ಒಗೆದರೂ ಚೆನ್ನಾಗಾಗಲೊಲ್ಲವು, ಅವು ಬೆಳ್ಳಗಾವಲ್ಲದೆ ತೀರ್ಥಭಟ್ಟರು ಬಿಡಲೊಲ್ಲರು ಈ ಮಾತು ಹೇಗಾದರೂ ಇರಲಿ ಶಾಸ್ತ್ರಿಗಳು ಮಾಡಿದ್ದ ಅಪರಾಧವೇನೆಂಬುದನ್ನು ಈಗ ಅರಿಕೆ ಮಾಡುವೆನು ಒಮ್ಮೆ ತೀರ್ಥಭಟ್ಟರೂ ಶಾಸ್ತ್ರಿಗಳ ಆಪ್ತವರ್ಗಕ್ಕೆ ಸೇರಿದ್ದವರು, ಆದರೆ, ಈಚೆಗೆ ಮಾತ್ರ ಅವರಿಬ್ಬರಿಗೂ ಎಣ್ಣೆಗೂ ಸೀಗೆಯ ಕಾಯಿಗೂ ಇರುವಂತಹ ಸ್ನೇಹ

ನಮ್ಮ ಊರಿನಲ್ಲಿ ಸೀಬೆಯ ಹಣ್ಣಿನ ಶಾಸ್ತ್ರಿಗಳನ್ನು ಅರಿಯದವರೇ ಇಲ್ಲ ಅವರು ಹಳ್ಳಿಗಾಡಿನಲ್ಲಿರತಕ್ಕವರು ಹಳ್ಳಿಯ ಜೀವನವು ನಾಗರಿಕತೆಗೆ ದೂರವೆಂದು ಭಾವಿಸಿರುವವರು ಕೂಡ, ಶಾಸ್ತ್ರಿಗಳನ್ನು ಒಂದುಸಾರಿ ನೋಡಿದರೆ ಸಾಕು, ಮಸಿಯ ಅರಿವೆಯಲ್ಲಿ ಕಟ್ಟಿದ ಮಾಣಿಕ್ಯದಂತೆ ಶಾಸ್ತ್ರಿಗಳು ಇದ್ದಾರೆನ್ನುವಷ್ಟನ್ನಾದರೂ ಅವರು ಒಪ್ಪಿಯೇ ಒಪ್ಪುವರು ಇದರ ಮಾತು ಹಾಗಿರಲಿ

ಒಂದು ದಿವಸ ಶಾಸ್ತ್ರಿಗಳು ಮಡಿಯನ್ನುಟ್ಟು ಶುಚಿರ್ಭೂತರಾಗಿ ಪಾರಾಯಣಕ್ಕೆ ಕುಳಿತಿದ್ದಾರೆ ಆ ವೇಳೆಗೆ ಸರಿಯಾಗಿ ಪಾಪಂಭಟ್ಟರು ಅಲ್ಲಿಗೆ ಬಂದರು ಅವರ ಹೆಸರು ಪಾಪನಾಶಿನೀ ರಮಣಭಟ್ಟರೆಂದು ಅವರ ತಂದೆಯು ತಿರುಪತಿಗೆ ಹೋಗಿದ್ದರಂತೆ ಅವರು ಪಾಪನಾಶಿನಿಯಲ್ಲಿ ಸ್ನಾನಮಾಡಿದಾಗ ಪಾಪವೆಲ್ಲ ಕೊಚ್ಚಿ ಹೋಗಿ ನೀರು ನೊರೆಗಟ್ಟಿ ಹರಿಯಿತಂತೆ ಆ ಬಳಿಕ ಅವರಿಗೆ ಪುತ್ರೋತ್ಸವವಾಯಿತಂತ ಆ ಕಾರಣದಿಂದ ಈ ಹೆಸರನ್ನು ಮಗನಿಗೆ ಇಟ್ಟೇತೀರಬೇಕೆಂದು ಅವರಿಗೆ ತೋರಿತಂತೆ ಆ ದೊಡ್ಡ ಹೆಸರು ಹ್ರಸ್ವವಾಗುತ್ತ ಬಂದು, ಕೊನೆಗೆ ಪಾಪಂಭಟ್ಟರೆಂಬ ರೂಪವನ್ನು ತಾಳಿತು. ಭಟ್ಟರನ್ನು ಶಾಸ್ತ್ರಿಗಳು ಆದರದಿಂದ ಬರಮಾಡಿಕೊಂಡರು.

ಭಟ್ಟರು, "ನಾನು ನಿನ್ಗೆ ಹೇಳಿದ್ದನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟು ಕೊಂಡಿದ್ದು ಅದರಂತೆ ನಡೆದುಬಿಡಪ್ಪಾ! ನಾನು ಎಷ್ಟಾದರೂ ನಿನಗಿಂತಲೂ ಹಿರಿಯ ನಿಮ್ಮ ತಂದೆಗೂ ನನಗೂ ಏಕದೇಹ ನ್ಯಾಯವಾಗಿತ್ತು ಆದುದ ರಿಂದ, ನನ್ನ ಮಾತನ್ನು ಅಲ್ಲಗಳೆಯಬೇಡ ಅಲ್ಲದೆ, ಅವನು ಬಡವ, ಪಾಪ! ಕೆಟ್ಟುಹೋಗುತ್ತಾನೆ ತಾಳಿದವನು ಬಾಳುವನು ಅಮೃತ ಕುಡಿ ದರೇ ಉಳಿಗಾಲವಿಲ್ಲ, ಇನ್ನು ವಿಷಕುಡಿದರೆ ಬದುಕುವ ಆಸೆಯುಂಟೋ? ಹಠಮಾಡಬೇಡ ಇಂತಹ ವಿಷಯಗಳಲ್ಲೆಲ್ಲ, 'ಗೆದ್ದೋನು ಸೋತ, ಸೋತೋನು ಸತ್ತ' ಎನ್ನುವ ಹಾಗೆಯೇ ಆಗುತ್ತೆ ರಾಜಿ ಮಾಡಿಕೊ; ಜಾಡಿಯಮಾತು ಕೇಳಬೇಡ" ಎಂದು ಹೇಳಿ ಹೊರಟುಹೋದರು

ಶಾಸ್ತ್ರಿಗಳ ಹೆಂಡತಿ ಲಕ್ಷ್ಮಮ್ಮನವರು ಭಟ್ಟರು ಮನೆಯನ್ನು ಬಿಟ್ಟೊಡ ನೆಯೇ ದಢಾರೆಂದು ಶಬ್ದವಾಗುವಂತೆ ಬೀದಿಯ ಬಾಗಲನ್ನು ತಳ್ಳಿ ಚಿಲಕ ವನ್ನು ಹಾಕಿ ಒಳಕ್ಕೆ ಬಂದರು ಅಲ್ಲದೆ, ಹಸಿದ ಹುಲಿಯಂತೆ ಆರ್ಭಟಿ ಸುತ್ತ, "ಅವರಿವರ ಮಾತು ಕೇಳಿ ಕೆಟ್ಟು ಹೋಗಬೇಡ, ನನ್ನ ಮಾತು ಕೇಳಿ ಮಣ್ಣು ಹುಯ್ಕೊ ಅಂತ ಹೇಳಿದಹಾಗೆ ನಮ್ಮ ಗ್ರಹಚಾರಕ್ಕೆ ಇವರ ಬೋಧನೆ ಬೇರೆ ನಮ್ಮ ಮನೆಯವರಿಗೆ ಒಳ್ಳೆಯವರೇ ಸಿಕ್ಕಿದರು ವೊನ್ನೆ, ಬಡ್ಡಿ ಬಂದಿದ್ರೆ ನನಗೆ ಒಂದು ಧರ್ಮಾವರದ ಸೀರೆ, ಎರಡು ಜೊತೆ ಬೊಂಬಾಯಿ ಬಳೆ ಸುಖವಾಗಿ ಆಗ್ತಾ ಇತ್ತು, ಅಷ್ಟೂ ಬಿಡಿಸಿಬಿಟ್ಟು ಅಸಲು ಮಾತ್ರ ಕೊಡಿಸಿ ತಲೆ ಸವರಿಬಿಟ್ಟರು ಆ ಅಸಲನ್ನೂ ಇವರು ತಮ್ಮ ಸಾಲಕ್ಕೆ ಕೊಟ್ಟುಕೊಂಡು ಕೂತರು ಇಷ್ಟಕ್ಕೂ ನಮ್ಮ ಚಿನ್ನ ಒಳ್ಳೇ ದಾಗಿದ್ರೆ ಅಕ್ಕನಾಲೆ ಏನುಮಾಡ್ತಾ ಇದ್ದ? ಈಗ ಹಿಡಿದಿರುವ ಕೆಲಸವೂ ಬೇಡ ಅಂತ ಹೇಳಿ ಹೋದರು" ಎಂದು ಮಾತಿನ ಗೂಡೆಯನ್ನು ಒದರಿ ಬಿಟ್ಟರು ಸ್ತ್ರೀಜನ ಸುಲಭವಾದ ಅಳುವಿನ ಅಸ್ತ್ರಕ್ಕೂ ಅಡ್ಡಿಯಿರಲಿಲ್ಲ ಅಂತು ಗುಡುಗಿನೊಡನೆ ಮಳೆಯೂ ಬಂದುದರಿಂದ, ಶಾಸ್ತ್ರಿಗಳು ಸ್ವಲ್ಪ ಬೆಪ್ಪಾದರು ಲಕ್ಷ್ಮಮ್ಮನವರು, "ಏಳಿ, ಏಳಿ! ನಿಮಗೆ ಸಂಸಾರವೇ ಬೇಕಿಲ್ಲ, ಇಷ್ಟಕ್ಕೂ ನನಗೇಕೆ ನಿಷ್ಠೂರ? ಯಾವುದು ಎಲ್ಲಾದರೂ ಹೋಗಲಿ" ಎಂದರು.

ಶಾಸ್ತ್ರಿಗಳು ಮೂರನೆಯ ದಿನ ಮಾನನಷ್ಟದ ಮೊಕದ್ದಮೆಯ ಸಂಬಂಧದಲ್ಲಿ ಪ್ರಯಾಣ ಹೊರಡಬೇಕಾಗಿದ್ದಿತು ಈ ರಗಳೆಯಲ್ಲ ತೀಪೂಭಟ್ಟರೇ ಸೂತ್ರಧಾರಿಗಳು ಅಪರಾಧಿಗೆ ಶಿಕ್ಷೆಯೂ ಆಗಿ ಅವನಿಂದ ಮಾನನಷ್ಟದ ಹಣವೂ ಬರುವ ಸುಯೋಗವನ್ನು ಕಳೆದುಕೊಳ್ಳಬಾರದೆಂಬುದು ತೀಪೂಭಟ್ಟರ ಉಪದೇಶ ಲಕ್ಷಮ್ಮನವರೂ ಈ ಸಲಹೆಯನ್ನೊಪ್ಪಿ ಹಿಮ್ಮೇಳಕ್ಕೆ ನಿಂತರು ಶಾಸ್ತ್ರಿಗಳ ಮನಸ್ಸು ಇದಕ್ಕೊಪ್ಪದು, ಆದರೂ, ಮಾನವು ಹೋಯಿತಲ್ಲಾ ಎಂಬ ಆಕ್ರೋಶದ ಬಾಧೆ ಈ ಸಂದಿಗ್ಧ ಸ್ಥಿತಿಯಲ್ಲ ಲಕ್ಷಮ್ಮನವರ ಬೋಧನೆ ಅದರ ಜೊತಗೆ ತಾರ್ಕಿಕರು ಕೂಡ ತಲೆದೂಗುವಂತೆ ತೀಪೂಭಟ್ಟರು ಹೇಳುತ್ತಿದ್ದ ಉಪದೇಶ ವಾಕ್ಯಗಳು ನಮ್ಮೂರಿನಲ್ಲೆಲ್ಲ ಶಾಸ್ತ್ರಿಗಳೇ ದೊಡ್ಡ ಒಕ್ಕಲು, ಅವರು ದೊಡ್ಡ ಜೋಡೀದಾರರು, ಇನಾಮತಿ ಜಮೀನುಗಳಂತು, ಅವರಿಗೆ ಬೇಕಾದಷ್ಟಿದ್ದುವು ಇಂತಹವರಿಗೆ ಮಾನನಷ್ಟದ ದಂಡ ದ್ರವ್ಯವು ಬರಬೇಕಾದರೆ, ಅವರ ತೂಕಕ್ಕೆ ತಡೆಯುವಷ್ಟು ಭಾರಿಯಾದ ಮೊಬಲಗೇ ಬರಬೇಕಷ್ಟೆ! ಆ ಮೊಬಲಗಿನಿಂದ ಚಿನ್ನದ ಡಾಬಿಗೆ ಮಾತ್ರವೇ ಅಲ್ಲದೆ ಜೋಮಾಲೆಯ ಸರಕ್ಕೂ ಹಣವು ಒದಗುವುದೆಂಬುದು ಲಕ್ಷಮ್ಮನವರ ಆಸೆ ಇಂತಹ ಸಮಯದಲ್ಲ, ನ್ಯಾಯಸ್ಥಾನದ ವ್ಯವಹಾರದಲ್ಲ ರಾಜಿಮಾಡಿಕೊಳ್ಳುವ ಹಾಗೆ ಪಾಪಂಭಟ್ಟರು ಶಾಸ್ತ್ರಿಗಳಿಗೆ ಬುದ್ಧಿ ಹೇಳಿದರೆ, ಲಕ್ಷಮ್ಮನವರಿಗೆ ರೇಗದೆ ಇದ್ದೀತೆ? ಅಂತು, ಶಾಸ್ತ್ರಿಗಳು ವ್ಯವಹಾರವನ್ನು ಹೂಡಿಬಿಟ್ಟರು ವಿಚಾರಣೆಯ ದಿನವೂ ಓಡಿಬಂದಿತು

ಆ ದಿನ ಶಾಸ್ತ್ರಿಗಳ ಮನೆಯಲ್ಲಿ ಗದ್ದಲವೋ ಗದ್ದಲ ದೇವರಮ ಧಾರಾಳ ಮನಸ್ಸೆಂಬುದಕ್ಕೆ ತೀಪೂಭಟ್ಟರ ಗಂಟಲೇ ನಿದರ್ಶನ: ಅವರು ಒಬ್ಬರಿದ್ದರೇ ಸಾಕು, ಇಪ್ಪತ್ತು ಮಂದಿಗಳಿಗೆ ಸಾಧ್ಯವಿಲ್ಲದಷ್ಟು ಗದ್ದಲ ಅವರೊಬ್ಬರಿಂದಲೇ ನಡೆದು ಹೋಗುತ್ತಿದ್ದಿತು ಶಾಸ್ತ್ರಿಗಳದು ಅತಿ ನಿಧಾನ ಪ್ರಕೃತಿ, ಅದರಲ್ಲಿಯೂ ಅವರು ದೇವರ ಪೂಜೆಗೆ ಕುಳಿತರಂತು, ಅವರಿಗೆ ಹೊತ್ತು ಎಷ್ಟಾಯಿತೆಂಬ ಪ್ರಜ್ಞೆಯೇ ಇರುತ್ತಿರಲಿಲ್ಲ, ಅವರು ಆನಂದಮಯರಾಗಿ ಕುಳಿತು ನಮ್ಮನ್ನು ತಾವೇ ಮರೆತುಹೋಗುತ್ತಿದ್ದರು. ಬೆಳಗಿನ ಒಂಬತ್ತು ಗಂಟೆಗೆ ಮೋಟಾರು ಬಸ್ಸಿನಲ್ಲಿ ಅವರು ಪ್ರಯಾಣಹೊರಟು,

ನ್ಯಾಯಸ್ಥಾನವಿರುವ ಊರಿಗೆ ಹನ್ನೊಂದು ಗಂಟೆಗೆ ತಲುಪಬೇಕು. ಆದ ಕಾರಣ, ಅವರ ಆಲಸ್ಯದ ದೆಸೆಯಿಂದ ಮೋಟಾರು ಬಸ್ಸು ತಪ್ಪಿ ಹೋದೀತೆಂಬ ಕಳವಳದಿಂದ, ತೀರ್ಥಭಟ್ಟರಿಗೆ ನಿದ್ದೆ ಕೂಡ ಸರಿಯಾಗಿ ಬಾರದೆ ಹೋಯಿತು. ಬೆಳಗಾಗುವುದೇ ತಡ, ಅವರ ಓಡಾಟವು ಮೊದಲಾಯಿತು. ಪಾಪಂಭಟ್ಟರೂ ಶಾಸ್ತ್ರಿಗಳಿಗೆ ಮತ್ತೊಮ್ಮೆ ಬುದ್ಧಿ ಹೇಳಿದರು. ಶಾಸ್ತ್ರಿಗಳಿಗೆ ಅದನ್ನು ಕೇಳಲು ಆಸೆ, ಆದರೆ ಅವರಿಗೆ ಉಭಯ ಸಂಕಟ. ಲಕ್ಷ್ಮಮ್ಮನವರ ಕಾಟವು ಒಂದುಕಡೆ, ತೀರ್ಥಭಟ್ಟರ ಪ್ರೋತ್ಸಾಹವು ಒಂದುಕಡೆ. ಇವೆರಡರ ದೆಸೆಯಿಂದ ಶಾಸ್ತ್ರಿಗಳು ಹಣ್ಣಾದರು. ತಾನೇನನ್ನು ಮಾಡುತ್ತಿರುವೆನೆಂಬ ಪರಿಜ್ಞಾನವೇ ಇಲ್ಲದೆ, ಅವರು ಯಂತ್ರದ ಬೊಂಬೆಯಂತೆ ಕೆಲಸಮಾಡತೊಡಗಿದರು. ಮನಸ್ಸಿನಲ್ಲಿ ಏನೋ ಒಂದು ವಿಧದ ಅಸಮಾಧಾನವು ಉಕ್ಕುತ್ತಿದ್ದರೂ, ಅವರು ಅದಕ್ಕೆ ಅಡ್ಡಗಟ್ಟೆಯನ್ನು ಹಾಕಿ, ಪ್ರಯಾಣ ಹೊರಡುವೆನೆಂದು ತಿಳಿಸಿಬಿಟ್ಟರು.

ಸುಮಾರು ಏಳೂವರೆ ಗಂಟೆಯ ವೇಳೆಗೇ ಶಾಸ್ತ್ರಿಗಳು ದೇವತಾರ್ಚನೆಗೆ ಪ್ರಾರಂಭಿಸಿದರು. ಅವರ ಮನಸ್ಸು ಬತ್ತವನ್ನೂ ಮೊಸರನ್ನೂ ಕಲಸಿದಂತಾಗಿದ್ದಿತು. ಈ ಮಧ್ಯೇ ಅವರು ತಮ್ಮ ಹಿತ್ತಿಲಿನಲ್ಲಿದ್ದ ಸೀಬೆಯ ಮರದಮೇಲೆ ಮಾಗಿದ ಎರಡು ಹಣ್ಣುಗಳನ್ನು ಕಂಡರು. ಆ ವರ್ಷಕ್ಕೆ ಅವೇ ಪ್ರಥಮ ಫಲಗಳು. ಅವುಗಳನ್ನು ಕಂಡು ಶಾಸ್ತ್ರಿಗಳಿಗೆ ಬಹಳ ಸಂತೋಷ. ಮತ್ತೆಲ್ಲಿಯೂ ಸೀಬೆಯಹಣ್ಣು ದೊರೆಯುವುದಕ್ಕೆ ಮೊದಲೇ, ದೇವರಿಗೆ ತಮ್ಮ ಮನೆಯ ಹಣ್ಣುಗಳನ್ನು ನೈವೇದ್ಯ ಸಮರ್ಪಣೆ ಮಾಡುವ ಸುಯೋಗವು ಲಭಿಸಿತೆಂದು ಶಾಸ್ತ್ರಿಗಳಿಗೆ ಆನಂದ. ಅವರಿಗೆ ಸೀಬೆಯ ಹಣ್ಣಿನ ಶಾಸ್ತ್ರಿಗಳೆಂದು ಹೆಸರು ಬಂದುದಕ್ಕೂ, ಅವರ ಹಿತ್ತಿಲಿನ ಚಂದ್ರ ಸೀಬೆಯ ಮರವೇ ಕಾರಣ. ಅದು ದೊಡ್ಡ ಮರ. ವರ್ಷಕ್ಕೆ ಒಂದು ಬಂಡಿ ತುಂಬುವಷ್ಟು ಹಣ್ಣುಗಳು--ದೊಡ್ಡ ಸ್ಥಾಲಿಯ ಗಾತ್ರದ ಹಣ್ಣುಗಳು-ದೊರೆಯುತ್ತಿದ್ದುವು. ಇದರ ಮೇಲೆ, ಆ ಮರದ ಹಣ್ಣುಗಳು ಸಕ್ಕರೆಯಂತೆ ಸಿಹಿಯಾಗಿರುತ್ತಿದ್ದುವು. ಶಾಸ್ತ್ರಿಗಳು ತಮ್ಮ ಆಪ್ತವರ್ಗದವರೆಲ್ಲರಿಗೂ ಪ್ರತಿ ವರ್ಷವೂ ಸೀಬೆಯ ಹಣ್ಣುಗಳನ್ನು ಹಂಚುತ್ತಿದ್ದರು. ಅವರಿಗೆ ಪ್ರೀತಿ

ಪಾತ್ರರಲ್ಲದವರು ನಮ್ಮ ಊರಿನಲ್ಲಿ ಹೆಚ್ಚು ಮಂದಿ ಇಲ್ಲವೆಂದೇ ಹೇಳಬೇಕು ಗುರುತಿಲ್ಲದವರು ಕೇಳಿದರೂ, ಶಾಸ್ತ್ರಿಗಳು ಆದರದಿಂದ ಸೀಬೆಯ ಹಣ್ಣುಗಳನ್ನು ಅವರಿಗೆ ಕೊಡುತ್ತಿದ್ದರು ಶಾಸ್ತ್ರಿಗಳ ನಿಜವಾದ ಹೆಸರೇ ಅನೇಕರಿಗೆ ಮರೆತುಹೋಗಿ ಅವರಿಗೆ ಸೀಬೇಹಣ್ಣಿನ ಶಾಸ್ತ್ರಿ ಎಂಬ ಹೆಸರೇ ಶಾಶ್ವತವಾಗಿ ನಿಂತಿತು ತೊದಲು ಮಾತಾಡುವ ಚಿಕ್ಕ ಮಕ್ಕಳು ಕೂಡ ಶಾಸ್ತ್ರಿಗಳನ್ನು "ಚೀಬೇ ಅಣ್ಣಿನ ಚಾತ್ತಿಗಳೇ" ಎಂದು ಕೂಗುತ್ತಿದ್ದರು ಹುಡುಗರು ಹಾಗೆ ಕೂಗಿದಾಗ ಶಾಸ್ತ್ರಿಗಳ ಸಂತೋಷವೇ ಸಂತೋಷ

ಆ ದಿನ ಶಾಸ್ತ್ರಿಗಳ ದೇವತಾರ್ಚನೆಯೂ ಸರಿಯಾಗಿ ನಡೆಯಲಿಲ್ಲ, ಅವರ ಮನಸ್ಸಿನಲ್ಲಿ ಏನೋ ಒಂದು ವಿಧದ ಬೇಗುದಿ ನೈವೇದ್ಯ ಸಮರ್ಪಣೆಗೆ ಮೊದಲು, ಹಾಲುಮಡ್ಡಿಯ ಧೂಪಾರತಿಗಾಗಿ ಕೆಂಡವನ್ನು ತರಲು ಶಾಸ್ತ್ರಿಗಳು ದೇವರ ಮನೆಯಿಂದ ಅಡಿಗೆಯ ಮನೆಗೆ ಹೋದರು ಅವರು ಹಿಂದಿರುಗಿ ಬರುವ ವೇಳೆಗೆ ಸೀಬೆಯ ಹಣ್ಣುಗಳು ಮಾಯವಾಗಿ ಹೋಗಿದ್ದುವು ಶಾಸ್ತ್ರಿಗಳು ಭ್ರಾಂತರಾಗಿ ಸುತ್ತಲೂ ನೋಡಿದರು, ಆ ಕೈಯಲ್ಲಿ ಒಂದು ಹಣ್ಣನ್ನೂ ಈ ಕೈಯಲ್ಲಿ ಒಂದು ಹಣ್ಣನ್ನೂ ಹಿಡಿದುಕೊಂಡು, ಅವಸರದಿಂದ ಕಚ್ಚಿಕಚ್ಚಿ ತಿನ್ನುತ್ತಿರುವ ಹುಡುಗನೊಬ್ಬನು ಮೂಲೆಯಲ್ಲಿ ನಿಂತು ಶಾಸ್ತ್ರಿಗಳ ಮುಖವನ್ನು ಕಂಡೊಡನೆಯೇ ಗಟ್ಟಿಯಾಗಿ ನಕ್ಕನು ಶಾಸ್ತ್ರಿಗಳು ಎಂದಿನಂತೆ ಆ ದಿನ ಹಸನ್ಮುಖದ ಶಾಸ್ತ್ರಿಗಳಾಗಿರಲಿಲ್ಲವೆಂಬುದು ಆ ಹುಡುಗನಿಗೆ ತಿಳಿಯದು ಹುಡುಗನು ಸಂತೋಷದಿಂದ ನಕ್ಕಾಗ ಅವನು ತಮ್ಮನ್ನು ಅಣಕಿಸಲು ಹಾಗೆ ನಕ್ಕನೆಂದು ಶಾಸ್ತ್ರಿಗಳ ಮನಸ್ಸಿಗೆ ತೋರಿತು ಅವರು ಅವನ ಕೆನ್ನೆಗೆ ಛಟೀರೆಂದು ಬಲವಾಗಿ ಒಂದು ಏಟನ್ನು ಕೊಟ್ಟರು ಧೂಪಾರತಿಯಿಂದ ಕೆಂಡಗಳು ಕೆಳಕ್ಕೆ ಬಿದ್ದುಹೋದುವು ಹುಡುಗನು ಅಳುತ್ತ ಓಡಿಹೋದನು ಹಾಗೆ ಓಡಿಹೋಗುವ ಅವಸರದಲ್ಲಿ ಅವನು ಕೆಂಡವನ್ನು ತುಳಿದು, ಉರಿಯಿಂದ ಹಾಗೆಯೇ ನಿಂತು, ತತ್ತರಿಸುತ್ತ ಓಡಿಹೋದನು ಶಾಸ್ತ್ರಿಗಳ ಮನಸ್ಸಿನಲ್ಲಿ ಏನೋ ಒಂದು ವಿಧದ ವಿಕಾರ ಹುಟ್ಟಿತು, ಅವರ ದೇಹದಲ್ಲಿ ಮನಸ್ಸೇ ಇರಲಿಲ್ಲವೆಂದು ಹೇಳುವಂತಿದ್ದಿತು ಅವರ ಸ್ಥಿತಿ. ಸ್ವಲ್ಪ ಹೊತ್ತಾದ ಬಳಿಕ, ಅವರು ದೇವತಾರ್ಚನೆಯನ್ನು

ಪೂರೈಸಿದರೂ, ಮನಸ್ಸಿಟ್ಟು ಎಂದಿನಂತೆ ಭಕ್ತಿಯಿಂದ ಆ ಕೆಲಸವನ್ನು ನೆರವೇರಿಸುವುದು ಅಂದು ಅವರಿಗೆ ಸಾಧ್ಯವಾಗಲಿಲ್ಲ. ಆ ವೇಳೆಗೆ ಅಲ್ಲಿಗೆ ಬಂದ ತೀರ್ಪೂಭಟ್ಟರ ಅವಾಂತರವು ಮಾತ್ರ ಇಲ್ಲದೆ ಹೋಗಿದ್ದರೆ, ಶಾಸ್ತ್ರಿಗಳು ತಲೆಯಮೇಲೆ ಕೈಯಿಟ್ಟುಕೊಂಡು ಸುಮ್ಮನೆ ಕುಳಿತುಬಿಡುತ್ತಿದ್ದರು ಶಾಸ್ತ್ರಿಗಳದು ಅತಿ ದಾಕ್ಷಿಣ್ಯ ಪ್ರಕೃತಿ, ಅವರು ಯಂತ್ರದ ಬೊಂಬೆಯಾದುದಕ್ಕೆ ಅದೇ ಮುಖ್ಯ ಕಾರಣ, ಅಪರಾಧಿಯಮೇಲೂ ಅವರಿಗೆ ಕೋಪವಿದ್ದಿತು

ಅಂದು ಬೆಳಗ್ಗೆ ಲಕ್ಷಮ್ಮನವರು ಬೇಗ ಅಡಿಗೆ ಮಾಡಿದರು; ಶಾಸ್ತ್ರಿಗಳಿಗೆ ಊಟವೂ ಆಯಿತು ಅವರನ್ನು 'ದಿಖಾವಾಗಿ' ಕಾಣುವಂತೆ ಮಾಡಬೇಕೆಂಬುದು ತೀರ್ಪೂಭಟ್ಟರ ಅಭಿಲಾಷೆ ಮಾನನಷ್ಟದ ಮೊಕದ್ದಮೆಗೆ ಹೋಗುವುದೆಂದರೆ ಸುಮ್ಮನೆ ಆದೀತೆ? ಶಾಸ್ತ್ರಿಗಳಿಗೆ ಉಡುಪನ್ನು ಹಾಕುವುದರಲ್ಲಿ ತೀರ್ಪೂಭಟ್ಟರ ಉತ್ಸಾಹವನ್ನು ಹೇಳಲಾಗದು ಶಾಸ್ತ್ರಿಗಳು ಎಷ್ಟು ಬೇಡವೆಂದರೂ ಭಟ್ಟರು ಬಿಡರು ಇದಕ್ಕೆ ತಕ್ಕಹಾಗೆ ಶಾಸ್ತ್ರಿಗಳು ಆಗಿನ ಅವಸರದಲ್ಲಿ ಬೆನ್ನಿನಮೇಲಕ್ಕೆ ಜೇಬು ಬರುವಂತೆ ಷರಟನ್ನು ಹಾಕಿಕೊಂಡರು ಅದನ್ನು ಕಂಡು ತೀರ್ಪೂಭಟ್ಟರಿಗೆ ಹೊಟ್ಟೆ ಹಿಡಿಸಲಾರದಷ್ಟು ನಗು "ಇವು ಎಂದೂ ಅರಿಯದ ನನಗ್ಯಾಕಪ್ಪ, ಈ ರಗಳೆಯಲ್ಲ!" ಎಂದು ಹೇಳುತ್ತ, ಶಾಸ್ತ್ರಿಗಳು ಅಂಗಿಯನ್ನು ಹಾಕಿಕೊಳ್ಳುವುದಕ್ಕೇನೋ ಸಮ್ಮತಿಸಲಿಲ್ಲ, ತೀರ್ಪೂಭಟ್ಟರು ಎರವಲಾಗಿ ತಂದಿದ್ದ ಷರಟನ್ನು ಮಾತ್ರ ದಾಕ್ಷಿಣ್ಯಕ್ಕಾಗಿ ಹಾಕಿಕೊಳ್ಳಲೇಬೇಕಾಯಿತು ತೀರ್ಪೂಭಟ್ಟರು ಜರತಾರಿಯನ್ನು ತೀಡಿ ತೀಡಿ ಒಂದು ರುಮಾಲನ್ನು ಬಹಳ ಕಷ್ಟಪಟ್ಟು ಸುತ್ತಿದರು ಅದೂ ಲೌಕಿಕರ ಮನೆಯಿಂದ ತಂದಿದ್ದ ಎರವಲು ರುಮಾಲು ಶಾಸ್ತ್ರಿಗಳು ಅದನ್ನಿಟ್ಟುಕೊಂಡು ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತ ತಮ್ಮ ಪ್ರತಿಬಿಂಬವನ್ನು ಸಂಬೋಧಿಸಿ, "ಅಯ್ಯೋ ನಿನ್ನ ಹಣೆಯ ಬರಹವೇ! ಏನು ಅವಸ್ಥೆ ಬಂತು ನಿನಗೆ?" ಎಂದು ಹೇಳಿ, ಆ ರುಮಾಲನ್ನು ಕಿತ್ತು ಎಸೆದುಬಿಟ್ಟರು, ಷರಟನ್ನೂ ಬಿಚ್ಚಿಹಾಕಿದರು ಭಟ್ಟರು, "ಎಲ್ಲೋ ಶುದ್ಧ ವೈದಿಕ ಗೊಡ್ಡು!" ಎಂದು ಹೇಳಿ, ಮನಸ್ಸಿಗೆ ಸ್ವಲ್ಪ ಸಮಾಧಾನ ಮಾಡಿಕೊಂಡರು ತಾವು ಹೆಸರಿನಮಟ್ಟಿಗಾದರೂ ಇನ್ನೂ ವೈದಿಕರಾಗಿಯೇ

ಉಳಿದಿದ್ದ ಅಂಶವು ಭಟ್ಟರಿಗೆ ಆಗ ತೋರಲಿಲ್ಲ. ಶಾಸ್ತ್ರಿಗಳು ಪೆಟ್ಟಿಗೆಯಿಂದ ಎರಡು ಶಾಲುಗಳನ್ನು ತೆಗೆದು ಒಂದನ್ನು ಹೊದೆದು ಮತ್ತೊಂದನ್ನು ತಲೆಗೆ ಸುತ್ತಿಕೊಂಡರು

ಆ ವೇಳೆಗೆ ನಮ್ಮ ಶ್ರೀಕಂಠ ಜೋಯಿಸರು ದಡದಡನೆ ಅಲ್ಲಿಗೆ ಬಂದರು ಅತ್ತುಅತ್ತು ಕಣ್ಣು ಕೆಂಪಾಗಿದ್ದ ಹುಡುಗನೊಬ್ಬನು ಅವರ ಜೊತೆಯಲ್ಲಿ ಕುಂಟುತ್ತ ಬಂದನು ಆ ಹುಡುಗನು ಅವರ ಮೊಮ್ಮಗ ಜೋಯಿಸರು ಶಾಸ್ತ್ರಿಗಳ ಬಳಿಗೆ ಹೋಗಿ, "ಒಳ್ಳೇ ಕೆಲಸ ಮಾಡಿದೆಯಯ್ಯಾ ಶಾಸ್ತ್ರೀ! ಒಳ್ಳೇ ಕೆಲಸ ಮಾಡಿದೆ! ನಾಲ್ಕು ಬೆರಳೂ ಬಾಸುಂಡೆ ಬೀಳುವಂತೆ ಮಗುವಿನ ಕೆನ್ನೆಯಮೇಲೆ ಹೊಡೆದಿದ್ದೀಯೆ; ಬಹಳ ದೊಡ್ಡ ಮನುಷ್ಯ! ಅವನ ಪಾಡು ನಾಯಿಪಾಡು ಕೆನ್ನೆ ಊದಿಹೋಗಿದೆ, ಅಂಗಾಲಿನಲ್ಲಿ ಹೊಪ್ಪಳೆ ಬಂದಿದೆ ನಿಮ್ಮ ತಂದೆ ದೇವರ ಹಾಗಿದ್ದರು ಅವರು ಒಳ್ಳೇ ಮಗನ್ನ ಪಡೆದರಪ್ಪ! ಒಳ್ಳೇ ಮಗನ್ನ ಪಡೆದರು!" ಎಂದರು ಹುಡುಗನ ಸ್ಥಿತಿಯನ್ನು ನೋಡಿ ಶಾಸ್ತ್ರಿಗಳ ಮುಖವೂ ಪೆಚ್ಚುಬಿದ್ದಿತು ಆದರೂ, ಅವರು, "ನಿಮ್ಮ ಹುಡುಗ ನೈವೇದ್ಯದ ಹಣ್ಣು ತಿಂದ, ನಾನು ಹೊಡೆದೆ" ಎಂದರು ಜೋಯಿಸರಿಗೆ ಇನ್ನೂ ರೇಗಿತು "ತಿಂದರೆ ಪ್ರಪಂಚ ಮುಳುಗಿಹೋದದ್ದೇನು? ಈ ಚಂಡಾಲ ಕೋಪ ಮನಸ್ಸಿನಲ್ಲಿದ್ದಮೇಲೆ, ದೇವರು ದಣಿದೇಹೋದ ನಿನ್ನ ಪೂಜೆಯ ವೈಭವಕ್ಕೆ! ಹುಡುಗ ಹಣ್ಣು ತಿಂದನಂತೆ! ತಿಂದರೇನಯ್ಯಾ? ನಿನ್ನ ಕೇಳಿ ತುಲಸೀ ತರೋಕೆ ನಾನೇ ಹೇಳಿಕಳಿಸಿದ್ದೆ ನೀನು ದೇವರ ಮನೆ ಬಿಟ್ಟುಹೋಗಿದ್ದೆ ಹುಡುಗ; ಹಣ್ಣು ನೋಡಿ ಆಶೆಯಾಯ್ತು; ತಿಂದುಬಿಟ್ಟ ತಿಂದರೆ ತಿಂದ, ಹಸುಮಕ್ಕಳ್ ದೇವರ ಸಮಾನ ನೀನು ಸುಮ್ಮನೆ ಇದ್ದಿದ್ದರೆ ದೇವರಿಗೆ ಎಷ್ಟೋ ಪ್ರೀತಿಯಾಗುತ್ತಿತ್ತು" ಎಂದು ಜೋಯಿಸರು ಗರ್ಜಿಸಿದರು ಶಾಸ್ತ್ರಿಗಳ ಮನಸ್ಸಿನಲ್ಲಿ ಒಂದು ವಿಧವಾದ ಯಾತನೆಯುಂಟಾಯಿತು ಏನೋ ಒಂದು ವಿಧದಲ್ಲಿ ಜೋಯಿಸರಿಗೆ ಸಮಾಧಾನ ಹೇಳಿ ಅವರನ್ನು ಕಳುಹಿಸಿಬಿಟ್ಟರು ಶಾಸ್ತ್ರಿಗಳು ತಲೆಯನ್ನು ತಗ್ಗಿಸಿಕೊಂಡು ಕಲ್ಲಿನ ವಿಗ್ರಹದಂತೆ ಸ್ವಲ್ಪ ಹೊತ್ತು ನಿಂತಿದ್ದರು ಈ ಮೊಕದ್ದಮೆಯಲ್ಲಿ ಸಾಕ್ಷಿಯಾಗಿದ್ದ ತಾವೂ ಶಾಸ್ತ್ರಿಗಳ

ಜೊತೆಯಲ್ಲಿಯೇ ಪ್ರಯಾಣ ಮಾಡಬೇಕೆಂಬುದು ತೀರ್ಪೂಭಟ್ಟರ ಇಷ್ಟ; ಆದರೆ ಅವರ ಮನೆಯಲ್ಲಿ ಶ್ರಾದ್ಧ, ಅದನ್ನು ಅವರು ನ್ಯಾಯಸ್ಥಾನಕ್ಕೆ ತಿಳಿಸಿಯೂ ಇದ್ದರು ಆದಕಾರಣ, ಅವರು ಹೊರಡಲು ಆಗಲಿಲ್ಲ

ಮೋಟಾರು ಬಸ್ಸು ಅಂದು ಹೊತ್ತು ಮೀರಿ ಬಂದುದರಿಂದ ಶಾಸ್ತ್ರಿಗಳು ಹನ್ನೊಂದು ಗಂಟೆಗೆ ಸರಿಯಾಗಿ ನ್ಯಾಯಸ್ಥಾನವನ್ನು ತಲಪುವುದಕ್ಕೆ ಸಾಧ್ಯವಿಲ್ಲದೆ ಹೋಯಿತು ಅವರು ಅಲ್ಲಿಗೆ ಸೇರುವ ವೇಳೆಗೆ ಒಂದು ಮೊಕದ್ದಮೆಯು ವಿಚಾರಣೆಯಾಗುತ್ತಿದ್ದಿತು ಶಾಸ್ತ್ರಿಗಳ ಕಡೆಯಲ್ಲಿ ತೀರ್ಪೂಭಟ್ಟರಲ್ಲದೆ ಮತ್ತಿಬ್ಬರು ಸಾಕ್ಷಿಗಳಿದ್ದರು ಅವರಲ್ಲಿ ಒಬ್ಬನಿಗೆ ಜ್ವರ, ಮತ್ತೊಬ್ಬನಿಗೆ ಏನೋ ಅನಿವಾರ್ಯ ಆದಕಾರಣ, ಸಾಕ್ಷಿಗಳು ಯಾರೂ ಬಂದಿರಲಿಲ್ಲ ವಿಚಾರಣೆಯನ್ನು ಮುಂದಕ್ಕೆ ಹಾಕಿಸಬೇಕೆಂಬುದು ಶಾಸ್ತ್ರಿಗಳ ಉದ್ದೇಶ, ಒಬ್ಬ ಲಾಯರನ್ನು ಗೊತ್ತುಮಾಡಿಕೊಳ್ಳಬೇಕೆಂದೂ ಅವರ ಅಭಿಲಾಷೆ ಶಾಸ್ತ್ರಿಗಳ ಮೊಕದ್ದಮೆಯನ್ನು ಕೂಗುವುದಕ್ಕೆ ಇನ್ನೂ ಬಹಳ ಕಾಲವಾಗುವುದೆಂದು ಗುಮಾಸ್ತೆಯು ತಿಳಿಸಿದನು

ನ್ಯಾಯಸ್ಥಾನ ಮಂದಿರದ ಎದುರಿಗೆ, ಸಮೀಪದಲ್ಲಿ ಒಂದು ದೊಡ್ಡ ಆಲದ ಮರವಿದ್ದಿತು ದಟ್ಟವಾಗಿಯೂ ಮಟ್ಟಸವಾಗಿಯೂ ಬೆಳೆದು ಸತ್ತಿಗೆಯಂತಿದ್ದ ಆ ಮರದಲ್ಲಿ ಹವಳದ ಗುಂಡುಗಳನ್ನು ಹೋಲುವ ಹಣ್ಣುಗಳು ತುಂಬಿದ್ದುವು ಮರದ ಕೆಳಗೆ ಪಚ್ಚೆಯ ಹಾಸಿಗೆಯಂತಿದ್ದ ಹಸಿರು ಹುಲ್ಲು; ಅದರ ಮೇಲೆ ಪವಡಿಸಿ ಒಂದು ಬಿಳಿಯ ಬಣ್ಣದ ಗೂಳಿಯು ಮೆಲುಕು ಹಾಕುತ್ತಿದ್ದಿತು ಮರವು ತನ್ನ ಬೆರಳುಗಳಿಂದ ಗೂಳಿಯ ಮೈಯನ್ನು ಸವರುತ್ತಿದೆಯೋ ಎಂಬಂತೆ ಗಾಳಿಯಿಂದ ಚರಿಸುತ್ತಿರುವ ಆಲದ ಬಿಳಿಲುಗಳು ಈ ನೋಟವನ್ನು ನೋಡಿ ಶಾಸ್ತ್ರಿಗಳು ಆನಂದದಿಂದ ಬೆರಗಾದರು ಅವರು ಆ ಮರದ ನೆರಳಿನಲ್ಲಿ ಕುಳಿತು ವಿಶ್ರಮಿಸಿಕೊಳ್ಳುತ್ತ, ಸೃಷ್ಟಿಕರ್ತನ ಮಹಿಮೆಯನ್ನು ಕೊಂಡಾಡುತ್ತಿದ್ದರು

ಆ ವೇಳೆಗೆ ಸರಿಯಾಗಿ ಅವರ ರೈತನಾದ ಕುನ್ನನು ಬಂದು "ಬುದ್ದೀ! ಪಾದಕ್ಕೆ ಅಡ್ಡಬಿದ್ದೆ" ಎಂದನು ಅವನೇ ಶಾಸ್ತ್ರಿಗಳ ಪ್ರತಿ

ಕಕ್ಷಿ ಶಾಸ್ತ್ರಿಗಳು, "ಏನೋ ಕುನ್ನ! ಉಂಡಮನೆಗೆ ಎರಡು ಬಗೆದೆ?" ಎಂದರು. ಕುನ್ನನು ಆದಿಕರ್ಣಾಟಕ ಪಂಗಡದವನು. ಶಾಸ್ತ್ರಿಗಳ ಪ್ರಶ್ನೆಗೆ ಅವನು, "ಆ ಹಾಳು ಈರುಳ್ಳಿ ಸಾಸ್ತ್ರಿ ನಂಗೆಲ್ಲಿ ಅನ್ನಾ ಹಾಕವ್ನೆ ಬುದ್ದೀ! ಸುಮ್ಮಸುಮ್ಮನೇ ನನ್ನಮ್ಯಾಗೆ ಮೊಕದ್ದಮೆ ಮಾಡವ್ರೆ ನಾನೇನೋ ಅವರನ್ನ ಈರುಳ್ಳಿ ಹಾರವಯ್ಯನೆಂತ ಕರೆದದ್ದುಂಟು ಅವರು ಕೋಪಮಾಡಿಕೊಂಡು ನನ್ನ ಬೈದದ್ದೂ, ನಾನು ರೇಗಿದ್ದೂ, ಪಟೇಲ ಅವರೆಲ್ಲಾ ಕಂಡದ್ದೂ, ಎಲ್ಲಾನೂ ಉಂಟು ಅಲ್ಲಾ ಬುದ್ದೀ! ನನ್ನ ತೋಟದ—ಅಲ್ಲ, ಅಲ್ಲ, ನೀವು ನಂಗೆ ಬೇಸಾಯಕ್ಕೆ ಕೊಟ್ಟಿರೋ ತೋಟದ—ಈರುಳ್ಳಿ ಮೂಲಂಗೀನೂ ಅಗ್ಗವಾಗಿ ಅವರಿಗೆ ನಾನು ಆಗಾಗ ಮಾರೋದುಂಟು ಅಲ್ಲಿನ ಮರದ ಪರಂಗೀಹಣ್ಣ ಕೊಟ್ಟವ್ನಿ ಎಷ್ಟೋ ಸಾರಿ ಇದರಾಗೆಲ್ಲಾ ನೀರು ತುಂಬಿರಾಕಿಲ್ವಾ? ಇವು ತಿನ್ನಾಕೆ ಅವರಿಗೆ ಎಗ್ಗಿಲ್ಲ ಬೆಂಡೇಕಾಯಿ ಕಿತ್ತುಕೊಂಡು ಹೋಗಾಕೆ ಎಗ್ಗು ನೋಡಿ ಬುದ್ದೀ! ಒಂದು ಬುಧವಾರ ಅವರು ನಮ್ಮೂರಿಗೆ ಬಂದಿದ್ರು ನಾನು ತೋಟದಾಗೆ ಸಣಬು ಹೊಸೀತಾ ಇದ್ದೆ ತರಕಾರೀ ಪಾತೀಲಿ ಬೆಂಡೇಗಿಡದಾಗೆ ಕಾಯಿ ಇತ್ತು ನಾಲ್ಕೈದು ಗಿಡ ಹಾಕಿದ್ದೀನಿ ಈ ಶಾಸ್ತ್ರಿ ಅದರ ಕಾಯಿ ಬೇಕೂ ಅಂದ್ರು 'ಕುಯ್ಕೋ ನಮ್ಮಪ್ಪ' ಅಂದೆ ಅವರು, 'ಗಿಡದ ಸುತ್ತ ನೀರು ಹಾಕಿದ್ದಿ, ನೀನೇ ಕುಯ್ದಿ' ಅಂದ್ರು ನಾನು ನಗಾ ತಡಿಲಾರದೆ 'ನಾನು ನೀರು ಹಾಕಿ ಬೆಳಸಿ ಈರುಳ್ಳಿ ಮೂಲಂಗಿ ತಂದು ಕೊಟ್ಟರೆ, ಅದರ ತುಂಬ ನೀರಿದ್ರೂ ಎಗ್ಗಿಲ್ಲ; ಗಿಡದ ಸುತ್ತ ನಾನು ಹಾಕಿದ ನೀರಿದ್ರೆ ಎಗ್ಗೋ?' ಅಂದೆ ಮಾತಿಗೆ ಮಾತು ಬಂದು ವಾಜ್ಯ ಬಿತ್ತು ಅವರ ಹೆಸರು ತಿಪ್ಪಾ-ತಿಪ್ಪೆ-ಅಲ್ಲ-ತೀಪುಭಟ್ಟರಂತಲ್ಲಾ ಬುದ್ದೀ! ಅವರನ್ನ ನಾನೇನೋ ಈರುಳ್ಳಿ ಶಾಸ್ತ್ರಿ ಅಂತಾನೆ ಕರೆಯೋದು ಅವರು ಈಗ ಮೊಕದ್ದಮೆ ಹಾಕವ್ರೆ" ಎಂದು ಉತ್ತರ ಹೇಳಿದನು ಶಾಸ್ತ್ರಿಗಳು ಕಕ್ಕಾಬಿಕ್ಕಾದರು; ಕ್ಷಣಮಾತ್ರದಲ್ಲಿ ಅವರಿಗೆ ನಿಜಸ್ಥಿತಿಯು ಗೋಚರವಾಯಿತು, ಕುನ್ನನು ತಮ್ಮನ್ನು ಸಿಕ್ಕಿದಂತೆ ಬೈದನೆಂದು ಸುಳ್ಳು ಹೇಳಿ, ತೀಪೂಭಟ್ಟರು ಹಗರಣವನ್ನು ತಂದಿಟ್ಟರೆಂಬುದು ನಿರ್ಧರವಾಯಿತು "ಭಟ್ಟನು ಬಡವ, ನ್ಯಾಯಸ್ಥಾನದ ವೆಚ್ಚಕ್ಕೆ

ಅವನಲ್ಲಿ ಹಣವಿರಲಿಲ್ಲ. ಆದುದರಿಂದ, ಅವನು ಈ ಅಡ್ಡ ಮಾರ್ಗವನ್ನು ಹಿಡಿದಿರಬೇಕು '' ಎಂಬುದೂ ಶಾಸ್ತ್ರಿಗಳಿಗೆ ಗೊತ್ತಾಗಿ, ಸಾಧುವಾದ ಆತನ ಮನಸ್ಸು ತಲ್ಲಣಿಸಿಹೋಯಿತು ತಾನು ತೀಪ್ರೂಭಟ್ಟರ ಕೈಯೊಳಗಿನ ಸೂತ್ರದ ಬೊಂಬೆಯಂತೆ ಕುಣಿದುದೂ, ಆತನ ಚಾಡಿಯ ಮಾತನ್ನು ಕೇಳಿದುದೂ, ಕುನ್ನನನ್ನು ಒಮ್ಮೆ ವಿಚಾರಿಸದೆ ಮೊಕದ್ದಮೆಯನ್ನು ಹೂಡಿದುದೂ, ಕ್ಷಮಿಸಲಾಗದ ಅಪರಾಧವೆಂದು ಆತನ ಮನಸ್ಸಿಗೆ ತೋರಿತು

ಕುನ್ನನು " ಈ ಪೆಟ್ಟಿಗೆ ನೋಡಿ ಬುದ್ಧೀ! ಇದರಿಂದ ನನ್ನ ಹೊಟ್ಟೆ ಉರೀತೈತೆ '' ಎಂದು ಹೇಳಿ, ಒಂದು ಪುಟ್ಟ ಜಾಯಿಕಾಯಿ ಮರದ ಪೆಟ್ಟಿಗೆಯನ್ನೂ, ಅದಕ್ಕೆ ಮುಚ್ಚಳದಂತಿದ್ದ ಒಂದು ಹಲಗೆಯ ಸೀಳನ್ನೂ ಶಾಸ್ತ್ರಿಗಳಿಗೆ ತೋರಿಸಿದನು ಶಾಸ್ತ್ರಿಗಳು ಅದೇನೆಂದು ಕೇಳಿದರು ತಾನು ಆಗಾಗ ಕೊಡುತ್ತಿದ್ದ ಪುಡಿ ಕಾಸುಗಳನ್ನು ತನ್ನ ಮಗನು ಅದರಲ್ಲಿ ಕೂಡಿಟ್ಟುಕೊಂಡಿದ್ದನೆಂದೂ, ತನ್ನ ಕಾಲು ಸ್ವಲ್ಪ ಉಳುಕಿದ್ದುದರಿಂದ ತಾನು ಬಂಡಿಯಲ್ಲಿ ಬರಬೇಕಾಯಿತೆಂದೂ, ಬಂಡಿಯ ಬಾಡಿಗೆಗೆ ದುಡ್ಡು ಸಾಲದೆಹೋದುದರಿಂದ ಆ ಪೆಟ್ಟಿಗೆಯಲ್ಲಿದ್ದ ದುಡ್ಡನ್ನು ತಾನು ತೆಗದುಕೊಳ್ಳುವ ಯೋಚನೆಯನ್ನು ಮಾಡಿದೆನೆಂದೂ, ಆಗ ಹುಡುಗನು ಅದನ್ನು ಕೊಡದೆ ಹರಮಾಡಿದುದರಿಂದ, ಅವನ ಕೆನ್ನೆಗೆ ಬಲವಾದ ಒಂದು ಏಟನ್ನು ಕೊಟ್ಟೆನೆಂದೂ, ಕೊನೆಗೆ ಅಳುವ ಹುಡುಗನನ್ನು ಬಿಟ್ಟುಬರಲಾರದೆ, ಆ ಪೆಟ್ಟಿಗೆಯ ತುಂಬ ದುಡ್ಡನ್ನು ತಂದು ಕೊಡುವುದಾಗಿ ಅವನಿಗೆ ಹೇಳಿ ಬಂದೆನೆಂದೂ ಕುನ್ನನು ತಿಳಿಸಿದನು ಶಾಸ್ತ್ರಿಗಳ ಮನಸ್ಸಿಗೆ ಸಹಿಸಲಶಕ್ಯವಾದ ಯಾತನೆಯುಂಟಾಯಿತು ಆತನು ಉತ್ತರ ಹೇಳದೆ ಸುಮ್ಮನೆ ಇದ್ದುದನ್ನು ಕಂಡು ಕುನ್ನನು ಹೊರಟುಹೋದನು ನಿರಪರಾಧಿಗಳಾದ ಇಬ್ಬರು ಹುಡುಗರಿಗೆ ಪೆಟ್ಟುಬಿದ್ದು ನೋವಾದದಕ್ಕೂ ತಾವೇ ಕಾರಣಭೂತರಾದುದಕ್ಕಾಗಿ ಶಾಸ್ತ್ರಿಗಳು ಬಹಳ ವ್ಯಥೆಪಟ್ಟರು, ಕೊನೆಗೆ, ತಮ್ಮ ಸಮೀಪದಲ್ಲಿ ಮಲಗಿ ಮೆಲುಕುಹಾಕುತ್ತಿದ್ದ ಗೂಳಿಯನ್ನು ಅವರು ದೃಷ್ಟಿಸಿ ನೋಡಿ, 'ಈಶ್ವರಾ! ನನ್ನನ್ನು ಒಂದು ಪಶುವಾಗಿಯೋ ಮರವಾಗಿಯೋ ಸೃಷ್ಟಿಸಿ ನಿರಪರಾಧಿಯಾಗಿರುವಂತೆ ಮಾಡಬಾರದಾಗಿತ್ತೆ ?'' ಎಂದು ನಿಟ್ಟುಸಿರುಬಿಟ್ಟರು

ಕಾಲಕ್ರಮದಲ್ಲಿ ಶಾಸ್ತ್ರಿಗಳ ಮೊಕದ್ದಮೆಯು ವಿಚಾರಣೆಗೆ ಬಂದಿತು. ಶಾಸ್ತ್ರಿಗಳು, "ಈ ಮೊಕದ್ದಮೆಯು ನಡೆಯಕೆಲಸವಿಲ್ಲ ಮಹಾಸ್ವಾಮಿ! ರಾಜಿಯಾಗಿದೆ'' ಎಂದುಬಿಟ್ಟರು, ನ್ಯಾಯಾಧಿಪತಿಗೂ ಅದನ್ನು ಕೇಳಿ ಸಂತೋಷವಾಯಿತು. ಕುನ್ನನ ಮನಸ್ಸಂತು, ಸಂತೋಷ ಸಮುದ್ರದಲ್ಲಿ ತೇಲಿ ಮುಳುಗಿ ಉಲ್ಲಾಸಗೊಂಡಿತು ಅವನು ಸ್ವಲ್ಪಕಾಲ ಏನೂ ತೋರದೆ ಸುಮ್ಮನೆ ನಿಂತುಬಿಟ್ಟನು ಕಾಗದಕ್ಕೆ ರುಜುವಾದಮೇಲೆ, ಶಾಸ್ತ್ರಿಗಳು ಇನ್ನು ಹೊರಡಬಹುದೆಂದು ನ್ಯಾಯಾಧಿಪರು ತಿಳಿಸಿದರು ತಮ್ಮ ಒಡೆಯರು ಕನಿಕರಗೊಂಡು ತನಗೆ ಶಿಕ್ಷೆಯನ್ನು ತಪ್ಪಿಸಿದರೆಂದೂ, ತೀಪ್ರೂಭಟ್ಟರು ಬಾರದಂತೆ ಮಾಡಿ ಅವರು ತನಗಾಗಿಯೇ ಅಲ್ಲಿಗೆ ಬಂದಿದ್ದರೆಂದೂ ಕುನ್ನನು ಭಾವಿಸಿದನು ತನ್ನ ಮೇಲೆ ಮೊಕದ್ದಮೆಯನ್ನು ಮಾಡಿದ್ದವರು ತೀಪ್ರೂ ಭಟ್ಟರೆಂದೇ ಕುನ್ನನು ಯೋಚಿಸಿದ್ದನು. ಅವನು "ಸಮನ್ಸ್'' ಓದಿಸಿ ಕೇಳಿ ದಾಗಲೂ ಕೂಡ, ಭಟ್ಟರ ಹೆಸರು ಬೀಳುವುದಕ್ಕೆ ಬದಲಾಗಿ ಕೈತಪ್ಪಿನಿಂದ ಶಾಸ್ತ್ರಿಗಳ ಹೆಸರು ಬಿದ್ದಿದ್ದಿತೆಂದೇ ನಿರ್ಧರಿಸಿದನು ಶಾಸ್ತ್ರಿಗಳಿಂದ ತನಗೆ ಶಿಕ್ಷೆ ತಪ್ಪಿತೆಂದು ತಿಳಿದು ಅವನು ಪಟ್ಟ ಆನಂದಕ್ಕೂ, ತೋರಿಸಿದ ಕೃತಜ್ಞತೆಗೂ ಪಾರವೇ ಇರಲಿಲ್ಲ ಅವನು ಶಾಸ್ತ್ರಿಗಳಿಗೆ ಅಡ್ಡಬಿದ್ದು ಅತ್ತುಬಿಟ್ಟನು ಶಾಸ್ತ್ರಿಗಳು ಅವನಿಗೆ ಮೂರು ರೂಪಾಯಿಗಳನ್ನು ಕೊಟ್ಟು, ಆ ರೂಪಾಯಿಗಳಿಗೆ ಚಿಲ್ಲರೆಯ ತಾಮ್ರದ ಕಾಸುಗಳನ್ನು ತೆಗೆದುಕೊಂಡು ಪೆಟ್ಟಿಗೆಗೆ ತುಂಬಿ ಹುಡುಗನಿಗೆ ಕೊಡಬೇಕೆಂದು ತಿಳಿಸಿ ಹೊರಟುಹೋದರು ಕುನ್ನನು ಚಿತ್ರದ ಬೊಂಬೆಯಂತೆ ನಿಂತುಬಿಟ್ಟನು ಅವನಿಗೆ ತೃಪ್ತಿಯಾಯಿತು; ಆದರೆ ಶಾಸ್ತ್ರಿಗಳ ಮನಸ್ಸಿಗೇನೋ ಶಾಂತಿಯಿಲ್ಲ ತಂದೆಗೆ ದುಡ್ಡನ್ನು ಕೊಟ್ಟರೆ ಮಗನು ಪೆಟ್ಟುತಿಂದ ನೋವು ಹೋದಂತಾಯಿತೇ ಎಂಬುದು ಅವರ ಮನಸ್ಸಿನಲ್ಲಿದ್ದ ಯೋಚನೆ ಇದಲ್ಲದೆ, ತಾವೇ ಅಂದು ಪ್ರಾತಃಕಾಲ ಜೋಯಿಸರ ಮೊಮ್ಮಗನನ್ನು ಹೊಡೆದುದಕ್ಕಾಗಿ ಶಾಸ್ತ್ರಿಗಳು ಬಹಳ ದುಃಖಿಸಿದರು, ತಮ್ಮ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದೂ ಅವರು ನಿರ್ಧರಿಸಿದರು ಆದರೂ ಅವರ ಮನಸ್ಸಿಗೆ ನೆಮ್ಮದಿಯಿಲ್ಲ; ಏನೋ ಒಂದು ಬಗೆಯ ಕಳವಳ, ಏನೋ ಒಂದು ಬಗೆಯ ಕಾತರ. •

* * * * *

"ಈ ಕಲಿಗಾಲದಲ್ಲಿ ದೇವರು ಪ್ರತ್ಯಕ್ಷವಾಗುವುದಿಲ್ಲವಂತೆ ಆಗದೆ ಏನು? ನನಗೆ ಸ್ವಾಮಿಯು ಒಲಿದೇ ಬಿಟ್ಟನಲ್ಲಾ!" ಎಂದು ಶಾಸ್ತ್ರಿಗಳು ಸಂತೋಷದಿಂದ ಹೇಳಿಕೊಳ್ಳುತ್ತಿದ್ದರು ಅವರು ತಮ್ಮ ಮುಂದಿದ್ದ ನೋಟವನ್ನು ನೋಡಿ ನೋಡಿ ನಲಿಯುತ್ತಿದ್ದರು: ನಟರಾಜನು ತಾಂಡವ ನೃತ್ಯ ಮಾಡುತ್ತಿದ್ದಾನೆ ಭಕ್ತನಾದ ನಂದನು—ಮಾನವರಿಗೆ ಅಸ್ಪೃಶ್ಯ ನಾದರೂ ಸ್ವಾಮಿಗೆ ಆದರಣೀಯನಾದ ಹೊಲೆಯ ನಂದನು—ಕೈಮುಗಿದು ಕೊಂಡು ತಲ್ಲೀನತೆಯಿಂದ ದೇವದೇವನ ನೃತ್ಯವನ್ನು ನೋಡುತ್ತಿದ್ದಾನೆ ಶ್ರೀಮಚ್ಛಂಕರಾಚಾರ್ಯರು ಭಕ್ತಾವತಂಸನೆಂದು ಹೊಗಳಿರುವ ಬೇಡರ ಕಣ್ಣಪ್ಪನು ಪುಳಕಜಲದಲ್ಲಿ ಮುಳುಗಿ ಸ್ವಾಮಿಯನ್ನೇ ಎವೆಯಿಕ್ಕದೆ ನೋಡು ತ್ತಿದ್ದಾನೆ ಆದಿಶಕ್ತಿಯೆಂಬ ಹೆಸರಿಗೆ ತಕ್ಕ ಗಾಂಭೀರ್ಯದಿಂದ ಕೂಡಿ ಸಿಂಹವಾಹಿನಿಯಾದ ದೇವಿಯು, ಎಡಗೈಯನ್ನು ತನ್ನ ವಾಹನದ ಕೊರಳಿನ ಮೇಲಿಟ್ಟುಕೊಂಡು ಮಂದಹಾಸವನ್ನು ಬೀರುತ್ತ ನಿಂತಿದ್ದಾಳೆ ಅಚ್ಚರಿ! ಅಚ್ಚರಿ! ಬಾಲಮೋಹನನಾದ ಮುದ್ದುಕೃಷ್ಣನು ಅಲ್ಲಿಗೆ ಓಡಿಬಂದುದನ್ನೂ, ಅವನ ಕೆನ್ನೆಗಳು ಊದಿಹೋಗಿದ್ದುದನ್ನೂ ಕಂಡು ನಟರಾಜನು ನೃತ್ಯ ವನ್ನು ನಿಲ್ಲಿಸಿದನು, ದೇವಿಯ ಮಂದಹಾಸವು ಮಾಯವಾಯಿತು, ಘನ ವಾದ ಅಂಧಕಾರವು ಕವಿದು ಭುವನಮೋಹಕವಾಗಿದ್ದ ದೃಶ್ಯವು ಅದರಲ್ಲಿ ಮುಳುಗಿ ಮರೆಯಾಯಿತು, ಸಿಂಹವೂ ಒಮ್ಮೆ ಗರ್ಜಿಸಿದಂತಾಯಿತು ಅಲ್ಲಿಗೆ ಶಾಸ್ತ್ರಿಗಳ ಸ್ವಪ್ನವೂ ಮರೆಯಾಗಿ ಅವರಿಗೆ ತಟಕ್ಕನೆ ಎಚ್ಚರವಾಯಿತು ಇನ್ನೂ ಬೆಳಕು ಹರಿದಿರಲಿಲ್ಲ ಬೀದಿಯಲ್ಲಿ ಒಂದು ನಾಯಿಯು ಬೊಗಳುತ್ತ ನಿಂತಿದ್ದಿತು ಬೆಳದಿಂಗಳಿನ ಬೆಳಕಿನಲ್ಲಿ ಶಾಸ್ತ್ರಿಗಳು ಅದನ್ನು ಕಂಡರು ಅವರಿಗೆ ತಾವು ಯಥಾಪ್ರಕಾರ ಚತ್ರದ ಕೈಸಾಲೆಯಲ್ಲಿ ಮಲಗಿದ್ದುದಾಗಿಯೂ ಭಾಸವಾಯಿತು ಶಾಸ್ತ್ರಿಗಳು ಅಂದು ಸಂಧ್ಯಾಕಾಲ ನ್ಯಾಯಸ್ಥಾನದಿಂದ ಬಂದಮೇಲೆ ಅವರ ಮನಸ್ಸಿನಲ್ಲಿ ಹುಟ್ಟಿದ್ದ ಬಗೆಬಗೆಯ ಆಲೋಚನೆಗಳೂ ಅವರು ಮಲಗುವುದಕ್ಕೆ ಮುಂಚೆ ಚತ್ರದ ಕೈಸಾಲೆಯಲ್ಲಿದ್ದ ಪ್ರಯಾಣಿಕ

ನೊಬ್ಬನು, "ಬೇಗ ಬಾರೋ ಬಾಲಮೋಹನಾ" ಎಂಬ ಹಾಡನ್ನು ಹೇಳಿದ್ದುದೂ ಆ ಸ್ವಪ್ನಕ್ಕೆ ಕಾರಣ. ಶಾಸ್ತ್ರಿಗಳು ನಿಜವಾದ ವಿದ್ಯಮಾನವನ್ನರಿತು ಒಮ್ಮೆ ನಿಟ್ಟುಸಿರು ಬಿಟ್ಟರು ಪರಿಚಯಸ್ಥರಿಲ್ಲದ ಊರಿಗೆ ಬಂದು ಚತ್ರದಲ್ಲಿ ಮಲಗಿದ್ದ ತಮ್ಮ ಸ್ಥಿತಿಯನ್ನು ಕುರಿತು ಶಾಸ್ತ್ರಿಗಳು ಬಗೆಬಗೆಯಾಗಿ ಯೋಚಿಸಿಕೊಂಡರು ಬೆಳಗಿನ ಪ್ರಪಂಚವೂ ಒಂದು ಚತ್ರದ ವಾಸವಲ್ಲವೆ? ಎಂಬ ಶಂಕೆಯು ಅವರ ಮನಸ್ಸಿನಲ್ಲಿ ತಲೆಹಾಕಿತು

ಶಾಸ್ತ್ರಿಗಳು ಊರಿಗೆ ಹೋದಬಳಿಕ ಅವರಿಗೂ ತೀಪೂಭಟ್ಟರಿಗೂ ಅಂತಃಕಲಹವೂ ವೈಮನಸ್ಯವೂ ಉಂಟಾದುವು ಏಕೆಂದರೆ, ಸಾಧುಜೀವಿಗಳಾದ ಶಾಸ್ತ್ರಿಗಳನ್ನು ಕೂಡ ಕೆಸರಿಗೆ ತಳ್ಳಿ, ಕುನ್ನನಮೇಲೆ ದ್ವೇಷವನ್ನು ತೀರಿಸಿಕೊಳ್ಳಬೇಕೆಂಬುದು ತೀಪೂಭಟ್ಟರ ಸಂಕಲ್ಪವಾಗಿದ್ದಿತು ಅದು ನೆರವೇರದೆ, ಭಟ್ಟರ ಮೋಸವು ಬಯಲಿಗೆ ಬಿದ್ದು, ಶಾಸ್ತ್ರಿಗಳಿಂದ ಅವರಿಗೆ ಚೆನ್ನಾಗಿ ಆಕ್ಷೇಪಣೆಯಾಯಿತು ಇದರ ಫಲವಾಗಿ ಭಟ್ಟರಿಗೆ ಶಾಸ್ತ್ರಿಗಳ ವಿಷಯದಲ್ಲ ಬದ್ಧದ್ವೇಷವುಂಟಾಯಿತು ಏನಾದರೂ ಮಾಡಿ ಶಾಸ್ತ್ರಿಗಳಿಗೆ ಮೂಗು ಮುರಿಯಬೇಕೆಂದು ಭಟ್ಟರಿಗೆ ಬಲವಾದ ಅಭಿಲಾಷೆ ಒಂದು ದಿನ ಮಟಮಟ ಮಧ್ಯಾಹ್ನ ಕೆರೆಯು ತುಂಬಿದ್ದಿತು ಕೋಡಿಯ ಬಳಿಯಲ್ಲಿ ನೀರಿನೊಳಕ್ಕೆ ಕಾಲನ್ನು ಇಳಿಯಬಿಟ್ಟುಕೊಂಡು ಒಬ್ಬ ಹುಡುಗನು ಕುಳಿತು ಕಪ್ಪೆಯ ಚಿಪ್ಪನ್ನು ಕಲ್ಲಿನಮೇಲೆ ತಿಕ್ಕುತ್ತಿದ್ದನು ಅದರ ಬೆನ್ನಿನ ಭಾಗವನ್ನು ಬೆಳ್ಳಗೆ ಮಾಡಬೇಕೆಂಬುದು ಅವನ ಸಂಕಲ್ಪ ಅದರ ಕಪ್ಪು ಹೋಗಿ ಬೆಳ್ಳಗಾಗುತ್ತ ಬಂದಹಾಗೆಲ್ಲ ಅವನ ಮುಖವು ಅರಳುತ್ತಿದ್ದಿತು ಆ ಸಂತೋಷಾತಿಶಯದಲ್ಲಿ ಅವನು ಆಯತಪ್ಪಿ ಕೋಡಿಯ ಒಳಮುಖಕ್ಕೆ ಮುಗುಚಿಕೊಂಡನು ಶಾಸ್ತ್ರಿಗಳು "ಹಾ, ಹಾ!" ಎಂದು ಮಿಂಚಿನ ವೇಗದಲ್ಲಿ ತಮ್ಮ ಉತ್ತರೀಯದಬಟ್ಟೆಯನ್ನು ಬಿಸುಟು ನೀರಿಗೆ ಇಳಿದು ಹುಡುಗನನ್ನು ಹಿಡಿದೆತ್ತಿದರು ಅಲ್ಲಿ ಅವರ ಎದೆಯ ಮಟ್ಟಕ್ಕೆ ನೀರಿದ್ದಿತು ಶಾಸ್ತ್ರಿಗಳಿಂದ ಹುಡುಗನ ಪ್ರಾಣವು ಉಳಿಯಿತು ಹುಡುಗನು ಭಯದಿಂದ ಬೆಚ್ಚಿಬೆಚ್ಚಿ ನಡುಗುತ್ತಿದ್ದವನು, ಸ್ವಲ್ಪ ಹೊತ್ತಿನಲ್ಲಿಯೇ ಚೇತರಿಸಿಕೊಂಡನು ಅವನು ಕುನ್ನನ ಮಗನೆಂಬುದನ್ನು ಕೇಳಿ ಶಾಸ್ತ್ರಿಗಳಿಗೆ ಸಂತೋಷವಾಯಿತು. ಸ್ವಲ್ಪ

ಹೊತ್ತಿನಲ್ಲಿಯೇ ಅಲ್ಲಿ ಜನಗಳ ಗುಂಪು ಸೇರಿತು ಕುನ್ನನೂ ಅಲ್ಲಿಗೆ ಬಂದು, "ನೀನು ನಮ್ಮ ಮನೆದೇವರೋ ನಮ್ಮಪ್ಪ! ಪೆಟ್ಟಿಗೆ ತುಂಬಿ ನೀವು ದುಡ್ಡು ಕಳುಹಿಸಿದ ಹೈದ ಇವನೇ ಬುದ್ಧೀ ಇವತ್ತು ಇವನ ಜೀವ ಉಳಿಸಿದಿರಿ ನಾನು ಸಾಯೋವರೆಗೆ ಗುಲಾಮನಾಗಿದ್ರೂ ತೀರದು, ನನ್ನೊಡೆಯಾ!" ಎಂದನು ಬಲಗೈ ಜಾತಿಯ ಹುಡುಗನನ್ನು ಮುಟ್ಟಿ ಶಾಸ್ತ್ರಿಗಳು ಜೀವವನ್ನುಳಿಸಿದರಲ್ಲಾ ಎಂಬುದಾಗಿ ರೈತರೆಲ್ಲರಿಗೂ ಅಚ್ಚರಿ ಶಾಸ್ತ್ರಿಗಳು ಬಟ್ಟೆಗಳನ್ನು ಒಗೆದು ಒಣಗಿಸಿಕೊಂಡು ಸ್ನಾನಮಾಡಿ ಊರಿಗೆ ಹೋದರು ಅಸ್ಪೃಶ್ಯರ ಹುಡುಗನನ್ನು ಶಾಸ್ತ್ರಿಗಳು ಮುಟ್ಟಿದುದು ಅಶಾಸ್ತ್ರೀಯವೆಂದು ತೀರ್ಥಭಟ್ಟರು ಸಿದ್ಧಾಂತಮಾಡಿಟ್ಟುಕೊಂಡರು ಅಷ್ಟರಲ್ಲಿ ಸ್ವಾಮಿಗಳು ಬರುವ ವರ್ತಮಾನ ಹುಟ್ಟಿ ತೀರ್ಥಭಟ್ಟರಿಗೆ ಚತುರ್ಭುಜವಾಯಿತು

ಶಾಸ್ತ್ರಿಗಳಮೇಲೆ ಅನಾಚಾರದ ಹೊರೆಯನ್ನು ಹೇರಲು ಭಟ್ಟರಿಗೆ ಮತ್ತೊಂದು ಕಾರಣವೂ ದೊರೆಯಿತು ಶಾಸ್ತ್ರಿಗಳು ಮೊಕದ್ದಮೆಯನ್ನು ಮುಗಿಸಿಕೊಂಡು ಬಂದಾಗಿನಿಂದ ಅವರ ದೇವತಾರ್ಚನೆಯ ವಿಧಾನವೇ ಬದಲಾಯಿತು ದಿನದಿನಕ್ಕೂ ಅವರ ನೈವೇದ್ಯ ಸಮರ್ಪಣೆಯ ಸಾಮಾನುಗಳು ಹೆಚ್ಚಿದುವು ಅವುಗಳನ್ನು ಅವರು ಬಾಲಕರಿಗೆ ಹಂಚುತ್ತಿದ್ದರು ಕೆಲವು ದಿನಗಳಲ್ಲಿಯೇ ಅವರ ವರ್ತನೆಯು ಇನ್ನೂ ಬದಲಾಯಿಸಿತು. ನೈವೇದ್ಯದ ಸಾಮಾನುಗಳನ್ನು ಹುಡುಗರಿಗೆ ಹಂಚುವಾಗ, ಹುಡುಗರು ಮೈಲಿಗೆಯಲ್ಲಿದ್ದರೂ ಅವರನ್ನು ಮುಟ್ಟಿ, ಶಾಸ್ತ್ರಿಗಳು ಅವರಿಗೆ ತಿಂಡಿಯನ್ನು ಕೊಡುತ್ತಿದ್ದರು ಆ ಬಳಿಕ ದೇವರಿಗೆ ಉತ್ತರ ಪೂಜೆಯನ್ನು ಮಾಡುತ್ತಿದ್ದರು ಅಂತೂ, ಪ್ರತಿದಿನವೂ ಶಾಸ್ತ್ರಿಗಳು ದೇವತಾರ್ಚನೆ ಮಾಡುವ ವೇಳೆಗೆ ಹುಡುಗರ ಹಿಂಡು ಸಿದ್ಧವಾಗುತ್ತಿದ್ದಿತು ನೈವೇದ್ಯದ ಕಾಲದಲ್ಲಿ ಹೊರತು ಉಳಿದ ವೇಳೆಯಲ್ಲಿ ಶಾಸ್ತ್ರಿಗಳಿಗೆ ಸ್ವಲ್ಪ ಮೈಲಿಗೆ—ಕೊನೆಗೆ ಒಂದು ದಾರದ ಎಳೆ—ಸೋಕಿದರೂ ಅವರು ಸ್ನಾನಮಾಡಿ ಬೇರೆ ಮಡಿ ಪಂಚೆಯನ್ನುಡುತ್ತಿದ್ದರು, ನೈವೇದ್ಯದ ಕಾಲದಲ್ಲಿ ಮಾತ್ರ ಮೈಲಿಗೆಯ ಹುಡುಗರನ್ನೂ ಮುಟ್ಟಿ, ಆದರದಿಂದ ತಿಂಡಿಯನ್ನು ಹಂಚುತ್ತಿದ್ದರು. ನಗುವಿನ ಲಹರಿ

ಯಲ್ಲಿ ತೇಲಿ ಓಲಾಡುತ್ತಿದ್ದ ಆ ಬಾಲಕರು ಬಾಲಕೃಷ್ಣನ ಪ್ರತಿನಿಧಿಗಳೆಂದು ಶಾಸ್ತ್ರಿಗಳ ಭಾವನೆ ನೈವೇದ್ಯದ ನಾಮಾನುಗಳನ್ನು ಹುಡುಗರಿಗೆ ಹಂಚು ವಾಗ ಅವರಿಗೆ ಎಷ್ಟು ಆನಂದವೆಂಬುದನ್ನು ಅವರೊಬ್ಬರೇ ಬಲ್ಲರು

ಶಾಸ್ತ್ರಿಗಳು ಅನುಸರಿಸಿದ ಪ್ರಾಯಶ್ಚಿತ್ತ ವಿಧಾನದ ನಿಜಸ್ವಭಾವವು ತೀರ್ಥಭಟ್ಟರಿಗೆ ತಿಳಿಯಲಿಲ್ಲ ಭಟ್ಟರ ಅಭಿಪ್ರಾಯವಲ್ಲ ಅವರು ದೇವರಿಗೆ ವೈಲಿಗೆ ಮಾಡಿದ ದೈವದ್ರೋಹಿಗಳೆಂದೇ ತೀರ್ಮಾನವಾಯಿತು ಸ್ವಾಮಿ ಗಳು ಪರಿವಾರ ಸಮೇತವಾಗಿ ಬಿಜಯಂಗೈದರು ಶಾನುಭೋಗರ ಮನೆ ಯಲ್ಲಿ ಆ ದಿನ ಪಾದಪೂಜೆ ತೀರ್ಥಭಟ್ಟರ ಓಡಾಟವೇ ಓಡಾಟ ಅದರ ಉದ್ದೇಶವೇನೆಂಬುದು ತಿಳಿದೇ ಇದೆಯಷ್ಟೆ! ಅವರು ಆ ದಿನ ಸ್ವಾಮಿಗಳ ಸನ್ನಿಧಿಯಲ್ಲಿಯೇ ಇದ್ದುದರಿಂದ ಸನ್ಯವನ್ನು ಹಾಕಿಕೊಳ್ಳಲು ಆಸ್ಪದವಿಲ್ಲದೆ ಹೋಯಿತು ಆದರೆ, ದೊಡ್ಡ ಕೆಲಸವನ್ನು ಹಿಡಿದಮೇಲೆ ಈ ಸಣ್ಣ ವಿಚಾರಕ್ಕೆ ಹೆದರಲಾದೀತೆ? ಸ್ವಾಮಿಗಳು ಚತ್ರದಲ್ಲಿ ಇಳಿದಿದ್ದರು ಅಲ್ಲಿಂದ ಪಾದಚಾರಿಗಳಾಗಿ ಅವರು ಶಾನುಭೋಗರ ಮನೆಗೆ ಬಿಜಯಂಗೈದರು ಶಾಸ್ತ್ರಿಗಳು ಬೆಳಗ್ಗೆ ಸ್ವಾಮಿಗಳ ಸವಾರಿಯು ಚಿತ್ತೈಸಿದಾಗಲೆ ಅವರ ದರ್ಶನ ಲಾಭವನ್ನು ಪಡೆದು ಮನೆಗೆ ಹೊರಟುಹೋಗಿದ್ದರು ಶ್ರೀಗಳವರು ಪರಿ ವಾರದೊಡನೆ ಶಾನುಭೋಗರ ಮನೆಗೆ ಬಿಜಯಂಗೆಯ್ಯುವಾಗ, ಒಂದು ಮನೆಯ ಬಳಿಯಲ್ಲಿ ನಿಂತುಬಿಟ್ಟರು ಅದು ಶಾಸ್ತ್ರಿಗಳ ಮನೆ ದೊಡ್ಡದೊಡ್ಡ ಜಗುಲಿಗಳು, ಅವುಗಳ ತುಂಬ ಹುಡುಗರು ಕುಳಿತಿದ್ದರು, ಆದರೂ, ಅಂದು ಹುಡುಗರ ಸಂಖ್ಯೆಯು ಬಹಳ ಕಡಿಮೆ ಆನೆಯನ್ನು ನೋಡುವ ಸಡಗರ ದಲ್ಲಿ ಅನೇಕರು ಶಾಸ್ತ್ರಿಗಳ ಮನೆಗೆ ಬಂದಿರಲಿಲ್ಲ ಉಳಿದವರು ಆಗಲೇ ಒಂದುಸಾರಿ ಆನೆಯನ್ನು ನೋಡಿ ಬಂದಿದ್ದರು ಆದರೂ, ಅವರ ಆಸೆಯು ಇನ್ನೂ ಪೂರ್ತಿಯಾಗಿ ತೀರಿರಲಿಲ್ಲ ತಿಂಡಿಯನ್ನು ಬಿಡಲು ಇಷ್ಟವಿಲ್ಲದೆ ಅವರು ಶಾಸ್ತ್ರಿಗಳ ಮನೆಗೆ ಬಂದಿದ್ದರು ಶಾಸ್ತ್ರಿಗಳು ತಿಂಡಿಯನ್ನು ಹಂಚು ತ್ತಿದ್ದುದನ್ನು ಸ್ವಾಮಿಗಳು ದೂರದಿಂದಲೇ ನೋಡಿ, ತಮ್ಮ ನಡಿಗೆಯನ್ನು ಸಾವಕಾಶ ಮಾಡಿದರು, ಕೊನೆಗೆ, ಎವೆಯಿಕ್ಕದೆ ಅದನ್ನೇ ನೋಡುತ್ತ ಒಂದೆರಡು ನಿಮಿಷಗಳ ಕಾಲ ಸುಮ್ಮನೆ ನಿಂತುಬಿಟ್ಟರು, ಆ ಬಳಿಕ ಸ್ವಲ್ಪ

ನಕ್ಕು ಮುಂದಕ್ಕೆ ಬಿಜಯಂಗೈಯುವುದರಲ್ಲಿದ್ದರು ಅಷ್ಟುಹೊತ್ತಿಗೆ ಶಾಸ್ತ್ರಿಗಳು ನಿದ್ದೆಯಿಂದೆಚ್ಚೆತ್ತವರಂತೆ—ನರಕ್ಕನೆ ಯಾವುದೋ ಕಾರಣದಿಂದ ಬಹಿರ್ಮುಖರಾದ ಯೋಗಿಗಳಂತೆ—ಬೀದಿಯಲ್ಲಿಯ ನೋಟವನ್ನು ಕಂಡು, ತಿಂಡಿಯ ಪಾತ್ರೆಯನ್ನು ಹುಡುಗಂಗೊಪ್ಪಿಸಿ "ಇದಷ್ಟೂ ನಿಮ್ಮದೇ, ಹಂಚಿಕೊಂಡು ಪಾತ್ರೆಯನ್ನು ಮನೆಗೆ ಕೊಡಿ" ಎಂದು ಹೇಳಿ ದಡದಡನೆ ಓಡಿಬಂದು ಬಾಗಿಲಿನ ಬಳಿಯಲ್ಲಿ ನಿಂತಿದ್ದ ಶ್ರೀಗಳವರಿಗೆ ದಂಡ ಪ್ರಣಾಮ ಮಾಡಿದರು, ತರುವಾಯ ಶ್ರೀಗಳವರೊಡನೆ ಶಾನುಭೋಗರ ಮನೆಗೆ ತೆರಳಿದರು ಅತ್ತ ತೀಪೂಭಟ್ಟರು ತಮ್ಮ ದ್ವೇಷದ ಕತ್ತಿಯನ್ನು ಮಸೆಯಲಾರಂಭಿಸಿದರು ಸ್ವಾಮಿಗಳೇ ಖುದ್ದಾಗಿ ಶಾಸ್ತ್ರಿಗಳ ನೀಚಕೃತ್ಯವನ್ನು ಪರಾಂಬರಿಸಿ ನಕ್ಕಿರುವಾಗ, ಭಟ್ಟರಿಗೇನು ಕೊರತೆ? ಪಾದಪೂಜೆಗಾಗಿ ಶಾನುಭೋಗರ ಮನೆಗೆ ಬಂದಿದ್ದ ಶ್ರೀಗಳವರು ಪದೇ ಪದೇ ಶಾಸ್ತ್ರಿಗಳನ್ನೇ ದೃಷ್ಟಿಸಿ ನೋಡುತ್ತಿದ್ದರು ತೀಪೂಭಟ್ಟರಿಗೆ ಅದನ್ನು ನೋಡಿ ನೋಡಿ ಸಂತೋಷ ಸ್ವಾಮಿಗಳಿಗೆ ಅಸಮಾಧಾನವಾಗಿದ್ದುದೇ ಅದಕ್ಕೆ ಕಾರಣವೆಂದು ಅವರು ನಿರ್ಧರ ಮಾಡಿದರು

ಅಂದು ಸಾಯಂಕಾಲ ಮಠದಲ್ಲಿ (ಛತ್ರದಲ್ಲಿ) ಸ್ವಾಮಿಗಳ ಉಪನ್ಯಾಸ ಛತ್ರದ ತುಂಬ ಜನರು ತುಂಬಿದ್ದರು ಗಂಗಾಪ್ರವಾಹದಂತೆ ಸ್ವಾಮಿಗಳ ಉಪನ್ಯಾಸ ಪಂಡಿತ ಪಾಮರರೆಲ್ಲರಿಗೂ ತಿಳಿಯುವಂತೆ ಸ್ವಾಮಿಗಳು ಉಪನ್ಯಾಸ ಮಾಡಿ ಸಭಿಕರೆಲ್ಲರನ್ನೂ ಸಂತೋಷಗೊಳಿಸಿದರು ಅವರ ಉಪದೇಶ ವಾಕ್ಯಗಳನ್ನು ಕೇಳಿ ಆನಂದಿಸದವರೇ ಇಲ್ಲ ಆದರೆ ತೀಪೂಭಟ್ಟರೊಬ್ಬರಿಗೆ ಮಾತ್ರ ಸಂತೋಷಕ್ಕಿಂತ ಕೇವಲ ಆತಂಕವೇ ಹೆಚ್ಚಾಗಿದ್ದಿತು ಸ್ವಾಮಿಗಳೇ ಎಲ್ಲ ಹೆಚ್ಚು ಹೊತ್ತು ಉಪನ್ಯಾಸ ಮಾಡಿಬಿಡುತ್ತಾರೋ, ತಮಗೆಲ್ಲಿ ಶಾಸ್ತ್ರಿಗಳಮೇಲೆ ದೂರುಹೇಳಲು ಅವಕಾಶವಿಲ್ಲದೆ ಹೋದೀತೋ-ಎಂಬುದಾಗಿ ಅವರಿಗೆ ಆತಂಕ, ಆದರೂ ಶ್ರೀಗಳವರ ಉಪನ್ಯಾಸದಿಂದ ಆನಂದಪಟ್ಟಂತೆ ನಟಿಸಿ, ಅವರನ್ನು ಒಲಿಸಿಕೊಂಡು ತಾವು ಕಟ್ಟಬೇಕೆಂದಿದ್ದ ಕಟ್ಟಡಕ್ಕೆ ಬಲವಾದ ತಳಹದಿಯನ್ನು ಹಾಕಬೇಕೆಂಬ ಕುತೂಹಲ; ಈ ಆತಂಕ ಕುತೂಹಲಗಳ ಅವಾಂತರದಲ್ಲಿ ಭಟ್ಟರು ಕೋಟಲೆಪಡುತ್ತಿದ್ದರು.

ಆದಕಾರಣ, ಉಪನ್ಯಾಸವನ್ನು ಮನಸ್ಸಿಟ್ಟು ಕೇಳುವುದು ಅವರಿಗೆ ಸಾಧ್ಯ ವಾಗಲಿಲ್ಲ ಹಾಗೆ ಕೇಳಿದ್ದರೂ ಅದರಿಂದ ಅವರ ಮನಸ್ಸಿನಮೇಲೆ ಹೆಚ್ಚು ಪರಿಣಾಮವಾಗುತ್ತಿರಲಿಲ್ಲವೆಂದೇ ತೋರುತ್ತದೆ ಕಪ್ಪೆಯು ಕಮಲದ ಬುಡದಲ್ಲಿದ್ದ ಮಾತ್ರಕ್ಕೇ ಅದರ ಪರಿಮಳವನ್ನು ಗ್ರಹಿಸಿ ಆನಂದಿಸ ಬಲ್ಲುದೆ?

ಯಥಾಕಾಲದಲ್ಲ ಸ್ವಾಮಿಗಳ ಉಪನ್ಯಾಸವು ಮುಗಿಯಿತು ಒಡನೆಯೆ ತೀಪೂಭಟ್ಟರು ಸರಕ್ಕನೆ ಎದ್ದು ನಿಂತು, ಘನಸಂಗೀತಗಾರನೆಂಬುದಾಗಿ ತಿಳಿದುಕೊಂಡಿರುವ ಮನುಷ್ಯನಂತೆ ಗಂಟಲನ್ನು ಸರಿಮಾಡಿಕೊಂಡು, "ಮಹಾಸನ್ನಿಧಾನದ ಪಾದಧೂಳಿಯಿಂದ ನಮ್ಮ ಊರೇ ಪವಿತ್ರವಾಯಿತು ಶ್ರೀಗಳವರ ಉಪದೇಶದಿಂದ ನಾವೆಲ್ಲರೂ ಧನ್ಯರಾದೆವು ಆದರೆ, ಈ ಊರಿನಲ್ಲಿ ಒಬ್ಬರ ಮನೆಯಲ್ಲಿ ಮಾತ್ರ, ಬ್ರಾಹ್ಮಣ್ಯನೇ ತಲೆತಗ್ಗಿಸುವಷ್ಟು, ಅನಾಚಾರವು ನಡೆಯುತ್ತ ಇದೆ ಶ್ರೀಗಳವರು ಅವರಿಗೆ ಬಹಿಷ್ಕಾರ ಪತ್ರ ವನ್ನನುಗ್ರಹಿಸಿ ಬ್ರಾಹ್ಮಣ್ಯದ ಖ್ಯಾತಿಯನ್ನುಳಿಸಬೇಕು" ಎಂಬ ಪೀಠಿಕೆ ಯೊಡನೆ ಶಾಸ್ತ್ರಿಗಳಮೇಲೆ ದೂರನ್ನು ಹೇಳಲು ಪ್ರಾರಂಭಿಸಿದರು ಬಾಯಿ ಪಾಠಮಾಡಿದ್ದ ಮೊದಲಣ ನಾಲ್ಕು ವಾಕ್ಯಗಳೂ ಮುಗಿದ ಬಳಿಕ, ಭಟ್ಟರ ಮುರುಡು ಮಾತುಗಳು ಸಾಗಾಲೋಟದಲ್ಲಿ ಓಡಿದುವು ತೀಪೂಭಟ್ಟರ ವಾಕ್ಯಾರ್ಥವು ಮುಗಿದಮೇಲೆ, ಪಾಪಂಭಟ್ಟರು, ನಡೆದ ಸಂಗತಿಗಳನ್ನು ನಡೆದಂತೆಯೇ ತಿಳಿಸಿ ಶಾಸ್ತ್ರಿಗಳ ಪರವಾಗಿ ಮಾತನಾಡಿದರು ಆ ಬಳಿಕ ಸ್ವಾಮಿಗಳವರು, "ಅವರು ಇಲ್ಲಿದ್ದಾರೆಯೆ?" ಎಂದರು ಶಾಸ್ತ್ರಿಗಳು, "ಸನ್ನಿಧಾನದಲ್ಲಿದ್ದೇನೆ" ಎಂದು ನಿಂತುಕೊಂಡರು ಸ್ವಾಮಿಗಳು ತೀಪೂ ಭಟ್ಟರ ಕಡೆಗೆ ನೋಡಿ "ಇವರ ವಿಷಯವೋ ನೀವು ಹೇಳಿದ್ದು? ಈ ಶಾಸ್ತ್ರಿಗಳು ಈ ಊರಿನಲ್ಲಿರುವುದು ನಿಮ್ಮೆಲ್ಲರ ಪುಣ್ಯೋದಯ ಇವರು ಹುಡುಗರಿಗೆ ತಿಂಡಿಯನ್ನು ಹಂಚುತ್ತಿದ್ದುದನ್ನು ನಾವು ನೋಡಿದೆವು ಆಗ, ಭಕ್ತಿಪಾರವಶ್ಯದಿಂದ ಬಾಹ್ಯಪ್ರಪಂಚದ ಜ್ಞಾನವನ್ನೇ ತೊರೆದು, ಅಲ್ಲಿ ನೆರೆದಿದ್ದ ಬಾಲಕರೆಲ್ಲರೂ ಪರಮಾತ್ಮನ ಪ್ರತಿಬಿಂಬಗಳೆಂದೇ ಭಾವಿಸಿ, ತಲ್ಲೀನತೆಯಿಂದ ಆಹಾರ್ಯವಸ್ತುವನ್ನು ಶಾಸ್ತ್ರಿಗಳು ವಿನಿಯೋಗ ಮಾಡು

ತ್ತಿದ್ದರು ಇವರು ಗೃಹಸ್ಥಾಶ್ರಮದಲ್ಲಿದ್ದೂ ಇಂತಹ ಭಕ್ತಿಯೋಗಿಗಳಾಗಿರುವುದನ್ನು ನೋಡಿ ನಮಗೆ ಅತ್ಯಂತ ಸಂತೋಷವಾಯಿತು ಇವರದು ಪರಿಪಕ್ವವಾದ ಚೇತನ ಪರಮಾತ್ಮನ ಮೇಲಣ ಭಕ್ತಿಯ ವಿಷಯವು ಬಂದರೆ ಸಾಕು, ಅವರ ಕಣ್ಣುಗಳಿಂದ ಆನಂದಬಾಷ್ಪವು ಹರಿಯುತ್ತದೆ ಸಭಿಕರಲ್ಲಿ ಅನೇಕರು ಈ ದಿನ ಇದನ್ನು ಗಮನಿಸಿರಬಹುದು ಶಾಸ್ತ್ರಿಗಳ ಪ್ರಾಯಶ್ಚಿತ್ತವಿಧಾನವು ಮನೋಜ್ಞವಾದುದು ಅದು ಅಭಿನಂದಿಸತಕ್ಕದ್ದೇ ಸರಿ ಇವರು ಮುಮುಕ್ಷು ಶ್ರೇಷ್ಠರು'' ಎಂದು ಅಪ್ಪಣೆ ಕೊಡಿಸಿದರು ಆ ವೇಳೆಗೆ ಸರಿಯಾಗಿ ಮಠದ ಹರಿಕಾರನು ಒಂದು ಜರತಾರಿಯ ಶಾಲು ಜೋಡಿಯನ್ನು ತೆಗೆದುಕೊಂಡು ಬಂದು ಮಠದ ಸರ್ವಾಧಿಕಾರಿಗಳ ಕೈಗೆ ಕೊಟ್ಟನು ಶ್ರೀಪೂಭಟ್ಟರು ವಾಕ್ಯಾರ್ಥ ಮಾಡುವುದಕ್ಕೆ ಮೊದಲೇ ಹರಿಕಾರನಿಗೆ ಆ ವಿಷಯದಲ್ಲ ಆಜ್ಞೆಯಾಗಿದ್ದಿತು ಸರ್ವಾಧಿಕಾರಿಗಳು ಶಾಸ್ತ್ರಿಗಳಿಗೆ ಶಾಲುಗಳನ್ನು ಹೊದಿಸಿದರು ಶಾಸ್ತ್ರಿಗಳು ''ಈ ಅಲ್ಪನಿಗೆ ಮಹಾಸನ್ನಿಧಾನದಿಂದ ಪರಮಾನುಗ್ರಹವಾಯಿತು ನಾನು ಖಂಡಿತವಾಗಿ ಇದಕ್ಕೆ ಅರ್ಹನಲ್ಲ ಇದೆಲ್ಲ ಸನ್ನಿಧಾನದ ಕೃಪಾಕಟಾಕ್ಷ ನಾನೊಬ್ಬ ಕೇವಲ ಅಜ್ಞಾನಿಯಾದ ಮನುಷ್ಯ'' ಎಂದು ಶ್ರೀಗಳವರಿಗೆ ಬಿನ್ನವಿಸಿ ದಂಡಪ್ರಣಾಮ ಮಾಡಿದರು ಶ್ರೀಗಳವರು ಹಸನ್ಮುಖದಿಂದ ''ನಾರಾಯಣ'' ಎಂದರು

ಸಭೆಯು ಮುಗಿದಮೇಲೆ ಶಾಸ್ತ್ರಿಗಳು ಮನೆಗೆ ಬಂದರು ಲಕ್ಷಮ್ಮನವರು ಬಿಕ್ಕಿ ಬಿಕ್ಕಿ ಅಳುತ್ತಿದ್ದರು ಶಾಸ್ತ್ರಿಗಳ ಮನೆಯಲ್ಲಿ ಮಾತೆತ್ತಿದರೆ ಮುಂಗಾರಿನ ಮಳೆ, ಗುಡುಗಿನ ಗಡಾವಣೆ ಆಗಾಗ ಮಳೆಯು ಬೀಳುತ್ತಲೇ ಇದ್ದುದರಿಂದ, ಶಾಸ್ತ್ರಿಗಳಿಗೆ ವರ್ಷವೆಲ್ಲ ವರ್ಷಾಕಾಲವೇ ಆಗಿದ್ದಿತೆಂದು ಹೇಳಬಹುದು ಆದುದರಿಂದ, ಅವರಿಗೆ ಅಂದು ಅತಿಶಯವೇನೂ ತೋರಲಿಲ್ಲ ಆದರೂ ಅವರು, ''ಇದೇಕೆ ಹೀಗೆ ಅಳೋಣ ?'' ಎಂದರು ಲಕ್ಷಮ್ಮನವರು ಅಳುವನ್ನು ಮತ್ತಷ್ಟು ಹೆಚ್ಚಿಸಿ, ''ನಿಮ್ಮ ಯೋಗ್ಯತೆ ತಿಳೀಲಿಲ್ಲ ನೋಡಿ, ಏ-ನೇ-ನೋ ಅಂದುಬಿಟ್ಟೆ ಮನೆಗೆ ಮಾರಿ, ಪರರಿಗೆ ಉಪಕಾರಿ ಅಂತ ಏನೇನೋ ಅಂದಿದ್ದೆ. ಸ್ವಾಮಿಗಳು ಬಂದದ್ದರಿಂದ

ನಿಮ್ಮ ನಿಜವಾದ ಯೋಗ್ಯತೆ ತಿಳೀತು ಚತ್ರದಲ್ಲಿ ನಡೆದದ್ದು ನೋಡೋಕೆ ಎರಡು ಕಣ್ಣು ಸಾಲದು ಎಲ್ಲರೂ ನನ್ನನ್ನು 'ಪುಣ್ಯವಂತೆ' ಅಂದರು" ಎಂದು ಹೇಳಿ ಮತ್ತಷ್ಟು ಅತ್ತರು ಶಾಸ್ತ್ರಿಗಳು ಭಯಪಟ್ಟಿದ್ದ ಮುಂಗಾರು ಮಳೆಯ ಹೊಡೆತವು ತಪ್ಪಿ, ಬಿಸಿಲಿನಲ್ಲಿ ಹಿತಕರವಾಗಿರುವ ತುಂತುರು ಮಳೆಯು ಬಿದ್ದಿತು ಅವರು ಪುಷ್ಪವೃಷ್ಟಿಯ ಸೌಖ್ಯವನ್ನನುಭವಿಸಿದರು.



# ಹಸುರು ಸೀರೆ

—o—

ಹಿಂದೆ ಬಡಾಯಿ ಬೋರಯ್ಯನೇ ನಮ್ಮ ಊರಿನ ವಸ್ತಾದಿಯಂತೆ ಬೆನ್ನಿನಮೇಲೆ ಒಬ್ಬ ಮನುಷ್ಯನ ಭಾರವನ್ನು ಹೊತ್ತುಕೊಂಡು ಒಂದು ಸಾವಿರ ದಂಡೆಗಳನ್ನು ಹೊಡೆದರೂ ಅವನಿಗೆ ದಣಿವಾಗುತ್ತಿರಲಿಲ್ಲವಂತೆ ತೋಳುಗಳ ಮಾಂಸ ಖಂಡಗಳನ್ನು ಉಬ್ಬಿಸಿ ಅವುಗಳಮೇಲೆ ಗುದ್ದಿಸಿಕೊಳ್ಳುವುದೇ ಅವನಿಗೊಂದು ಆನಂದ ಹಾಗೆ ಗುದ್ದಿದವರು ಕೈಯನ್ನು ನೋಯಿಸಿಕೊಂಡು ಸಂಕಟಪಡಬೇಕೇ ಹೊರತು ಅವನಿಗೆ ಬೇರೆ ಸ್ವಲ್ಪವೂ ಘಾಸಿಯಾಗುತ್ತಿರಲಿಲ್ಲ ಊರಿನ ಯುವಕರೆಲ್ಲರಿಗೂ ಅವನೇ ಅಧಿನಾಯಕ ದೊಡ್ಡವರು ಚಿಕ್ಕವರೆನ್ನದೆ ಊರಿನವರೆಲ್ಲರಿಗೂ ಅವನಲ್ಲಿ ಪ್ರೀತಿ ಅವನಲ್ಲಿ ಒಂದೇ ಒಂದು ದುರ್ಗುಣವಿದ್ದಿತು ಬಡಾಯಿ ಹೇಳಿಕೊಳ್ಳುವುದರಲ್ಲಿ ಅವನು ನಿಸ್ಸೀಮ ಆದುದರಿಂದ ಬಡಾಯಿ ಬೋರಯ್ಯನೆಂದೇ ಅವನಿಗೆ ಹೆಸರು ಬಿದ್ದುಹೋಯಿತು ಆದರೂ, ಅನೇಕರು ಅವನ ಪ್ರೊಂಘಾವಣೆಯ ಮಾತುಗಳನ್ನು ಆಸಕ್ತಿಯಿಂದ ಕೇಳುತ್ತಿದ್ದರು ಬಡಾಯಿ ಹೇಳುವುದರಲ್ಲಿಯೂ, ತೂಕವನ್ನಿಟ್ಟುಕೊಳ್ಳದೆ, ಅವನು ಮನಸ್ವಿಯಾಗಿ ಹರಟುತ್ತಿರಲಿಲ್ಲ ಆದಕಾರಣ, ಅವನ ಬಡಾಯಿಗೂ ಒಂದು ವಿಧದ ಕಳೆಯಿದ್ದಿತು ಜನರೆಲ್ಲರಿಗೂ ಅವನ ಮಾತುಗಳಲ್ಲಿ ಆದರ ಅವನೊಡನೆ ಅರೆಗಳಿಗೆಯಿದ್ದರೂ ಅವರೆಲ್ಲರ ಬೇಸರವೂ ಮಾಯವಾಗುವುದು ಚಿಕ್ಕ ವಯಸ್ಸಿನವನಾಗಿದ್ದೂ ತನ್ನ ಗಂಡನು ಇಷ್ಟುಮಟ್ಟಿಗೆ ಗಟ್ಟಿಗನಾಗಿರುವನೆಂಬುದೇ ನೀಲಮ್ಮನಿಗೊಂದು ಹೆಮ್ಮೆ ಆದರೆ, ತಾನು ಬಹುಕಾಲದಿಂದ ಕೇಳುತ್ತಿದ್ದರೂ ಅವನು ತನಗೆ ಹಸುರು ಬಣ್ಣದ ರೇಷ್ಮೆಯ ಸೀರೆಯನ್ನು ತಂದುಕೊಡಲಿಲ್ಲವೆಂದು ಅವಳಿಗೆ ಸ್ವಲ್ಪ ಅಸಮಾಧಾನ ಬೋರಯ್ಯನ ದೊಡ್ಡತನವನ್ನು ಕಂಡು ಅವನ ತಾಯಿಯು ಸಂತೋಷದಿಂದ ಹಿಗ್ಗುತ್ತಿದ್ದಳು, ಅವನು ಇನ್ನೂ ದೊಡ್ಡ ಒಕ್ಕಲಾಗಲೆಂದು ದೇವರಿಗೆ ಎಷ್ಟುಸಾರಿ ಹರಕೆ ಮಾಡಿಕೊಂಡರೂ ಅವಳ ಮನಸ್ಸಿಗೆ ತೃಪ್ತಿಯಿಲ್ಲ.

ಒಂದು ದಿನ ಶಾನುಭೋಗರ ಮನೆಯಲ್ಲಿ ಗದ್ದಲವೋ ಗದ್ದಲ ಈಗಿನ ಶಾನುಭೋಗರ ಹಿರಿಯರು ಆಗ್ಗೆ ಶಾನುಭೋಗರು ದೊರೆಗಳ ಚಿತ್ರಪಟವನ್ನು ಅವರ ಮನೆಗೆ ತಂದಿದ್ದರು ಅದನ್ನು ನೋಡಿಕೊಂಡು ಬರಲು ಊರಿನವರೆಲ್ಲರಿಗೂ ಕುತೂಹಲ ಜನಸಂದಣಿಯನ್ನಂತು ಹೇಳತೀರದು ಮರದ ಸರ್ವಾಧಿಕಾರಿಯ ಗರ್ಜನೆಯಂತೆ ಅಂದು ಬೋರಯ್ಯನ ಗಡಾವಣೆ ಪಟವನ್ನು ನೋಡಿದವರು ಹಿಂದಕ್ಕೆ ಸಾಗಬೇಕೆಂದೂ, ಉಳಿದವರಿಗೆ ಸ್ಥಳವನ್ನು ಬಿಡಬೇಕೆಂದೂ ಅವನ ಕಟ್ಟಪ್ಪಣೆ ಶಾನುಭೋಗರ ಮನೆಯ ಪಟಕ್ಕೆ ಇವನದೇನು ಪಾರಪತ್ಯವೆಂಬುದಾಗಿ ಕೆಲವರಿಗೆ ಕೋಪ ಆದರೂ, ಅವರು ಬಾಯಿ ಬಿಡುವುದಕ್ಕಿಲ್ಲ ಅವನಿಗೆ ಹೆದರದೆ ಇದ್ದರೂ, ಅವನ ದುಂಡು ತೋಳುಗಳಿಗೆ ಅವರು ಗೌರವವನ್ನು ಕೊಡಲೇಬೇಕಾಗಿದ್ದ ಅನಿವಾರ್ಯದ ಬಾಧೆಯು ಅವರ ಬಾಯಿಗೆ ಬೀಗವಾಗಿದ್ದಿತು ಅವನನ್ನು ಅಪಹಾಸ್ಯ ಮಾಡುವುದರಿಂದಲಾದರೂ ತೃಪ್ತಿಗೊಳ್ಳಬೇಕೆಂಬುದು ಅವರ ಕುತೂಹಲ ತಮ್ಮ ಕೋರಿಕೆಯು ಈಡೇರಲು ಸಮಯವು ಸಿಕ್ಕೀತೇ ಎಂದು ಅವರು ತೊಳಲುತ್ತಿದ್ದರು

ದೊರೆಗಳ ಪಟವನ್ನು ನೋಡಲು ಪೀಲಮ್ಮನೂ ಬಂದಳು ಶಾನುಭೋಗರ ಹೆಂಡತಿಯು ಅವಳಿಗೂ ಅವಳ ಜೊತೆಯಲ್ಲಿ ಬಂದಿದ್ದ ಇತರ ಹೆಂಗಸರಿಗೂ ಪಟವನ್ನು ತೋರಿಸಿ, "ನೋಡಿರಮ್ಮಾ, ನೋಡಿ!" ಎಂದಳು ಗಂಡಸರ ಗುಂಪಿನವರು ಪಟದ ಕಡೆಗೆ ನುಗ್ಗುವ ಹಾಗಿದ್ದುದನ್ನು ಕಂಡು, "ನಿಮ್ಮ ಸರದಿ ಮುಗಿದಿದ್ದೂ ಹೆಂಗಸರಿರೋದನ್ನೂ ನೋಡದೆ ನುಗಬೇಡಿ; ಎಲ್ಲೋ ಕುರಿಗಳು!" ಎಂದು ಬೋರಯ್ಯನು ಗದರಿಸಿದನು ಇದರಿಂದ ಗಂಡಸರ ಗುಂಪಿನಲ್ಲಿ ಅಸಮಾಧಾನವು ಹೆಚ್ಚಿತು ಬೋರಯ್ಯನು ಶಾನುಭೋಗರೊಡನೆ, "ನಮ್ಮ ದೊರೆಯವರನ್ನು ನಮಗೆ ತೋರಿಸಿದೆ; ತಣ್ಣಗಿರು ನಮ್ಮಪ್ಪ! ನೋಡಿ ಬುದ್ಧೀ! ಮಾಡಿದರೆ ಅವರ ಹತ್ತಿರ ಚಾಕರಿ ಮಾಡಬೇಕು ನಾನೇನೋ ಅವರ ಹತ್ತಿಲೇ ಕೆಲಸ ಮಾಡ್ತೀನಿ" ಎಂದನು ಸಮೀಪದಲ್ಲಿದ್ದ ತುಂಡಾಂಡಿಯೊಬ್ಬನು, "ನಮ್ಮ ಬೋರಯ್ಯನ ಬಡಾಯಿ ನಾಲಿಗೆ ಮೊಳದುದ್ದ, ಇದ್ದರೆ ಹಿಂಗಿರಬೇಕು" ಎಂದು

ಬಿಟ್ಟನು ಜನರೆಲ್ಲರೂ ಗಹಗಹಿಸಿ ನಕ್ಕರು ಬೋರಯ್ಯನಿಗೆ ಅವರ ವ್ಯಂಗ್ಯವಾದ ನಗುವನ್ನು ಕಂಡು ಹೀನಾಯವಾಯಿತು ಅವನೂ ಪ್ರಯತ್ನಪೂರ್ವಕವಾಗಿ ನಗುತ್ತಿದ್ದನು ನೀಲಮ್ಮನು ಸುಮ್ಮನಿರಬಾರದೆ! ತನ್ನ ಗಂಡನು ಶಾನುಭೋಗರೊಡನೆ ಹೇಳಿದ ಮಾತಿಗೆ ಅವರೆಲ್ಲರೂ ಸಂತೋಷಪಟ್ಟರೆಂದು ಅವಳು ತಪ್ಪಾಗಿ ಭಾವಿಸಿಕೊಂಡಳು ಹೆಂಗಸರ ಪರವಾಗಿ ತಾನೂ ಏನನ್ನಾದರೂ ಹೇಳಬೇಕೆಂದು ಅವಳಿಗೆ ಆಸೆ ಇದರ ಮೇಲೆಯೋ ಶಾನುಭೋಗರ ಹೆಂಡತಿಯು ಉಟ್ಟಿದ್ದ ಹಸುರುಬಣ್ಣದ ಜರತಾರಿಯ ಸೀರೆಯಲ್ಲೇ ಅವಳ ಮನಸ್ಸು ನಾಟಿಹೋಗಿದ್ದಿತು ಅವಳು ಶಾನುಭೋಗರ ಹೆಂಡತಿಯೊಡನೆ, "ಉಟ್ಟರೆ ಇಂಥಾ ಸೀರೆಯನ್ನು ಉಡಬೇಕು, ತಾಯಿಾ!" ಎಂದುಬಿಟ್ಟಳು ಜನಗಳೆಲ್ಲರೂ ಮೊದಲಿಗಿಮ್ಮಡಿಯಾಗಿ ನಕ್ಕರು ತನ್ನ ಜಾಣ್ಮೆಗೆ ಅವರು ತಲೆದೂಗಿ ಸಂತೋಷಿಸಿದರೆಂಬುದು ಅವಳ ಭಾವನೆ. ಆದುದರಿಂದ ಅವಳೂ ಅಟ್ಟಹಾಸದಿಂದ ನಕ್ಕಳು ಇದನ್ನು ಕೇಳಿ ನಾವು ಯಾರೊಬ್ಬರೂ ನಗಬೇಕಾದುದಿಲ್ಲ ನಾಟಕಗಳಲ್ಲಿ ಸಭಿಕರು ಚಪ್ಪಾಳೆ ತಟ್ಟುವುದುಂಟಷ್ಟೆ! ಕೆಲವು ಸಂದರ್ಭಗಳಲ್ಲಿ ಆನಂದವು ಅದಕ್ಕೆ ಕಾರಣವಲ್ಲ, ಪಾತ್ರವು (ನಟನು) ಹಾಡುವುದನ್ನು ನಿಲ್ಲಿಸಿ ತೆರೆಯ ಒಳಕ್ಕೆ ಹೋಗಲೆಂಬುದು ಅದರ ಆಶಯ ನಟರು ಅದನ್ನು ಅರಿಯದೆ, ಸಭಿಕರು ಮತ್ತಷ್ಟು ಸಂತೋಷಿಸಲೆಂಬ ಆಸೆಯಿಂದ ಹಾಡಿದುದನ್ನೇ ಒತ್ತಿ ಒತ್ತಿ ಹಾಡಿ, ಮದ್ದಲೆಯವನನ್ನು ಕುಸ್ತಿಗೆ ಕರೆಯುವುದನ್ನು ನಾವು ನೋಡಿಲ್ಲವೆ? ಪಟ್ಟಣಿಗರ ಪಾಡೇ ಹೀಗಾದಮೇಲೆ, ಹಳ್ಳಿಯವಳಾದ ನೀಲಮ್ಮನನ್ನು ನಾವೇಕೆ ಹಾಸ್ಯ ಮಾಡಬೇಕು? ಈ ವಿಷಯವು ಹಾಗಿರಲಿ ಬೋರಯ್ಯನ ಮನಸ್ಸು ಕಳೆಗುಂದಿ, ಬೇಸಗೆಯ ಕಾಲದಲ್ಲಿ ಬೆಟ್ಟದ ದೋಣೆಯ ನೀರು ಕೆಳಕ್ಕಿಳಿದುಹೋಗುವಂತೆ, ಅಧಃಪಾತಾಳಕ್ಕಿಳಿದುಹೋಯಿತು ಆದರೂ, ನುಂಗಲಾರದ ತುತ್ತನ್ನು ಅವನು ನುಂಗಬೇಕಾಯಿತು "ಅತ್ತೆಯ ಮೇಲಣ ಕೋಪ ಕೊತ್ತಿಯ ಮೇಲೆ", ಕಂಡೇ ಇದೆ ನೀಲಮ್ಮನ ಮಾತುಗಳಿಂದಲೇ ತನಗೆ ಹೆಚ್ಚು ಅಪಮಾನಕ್ಕೆ ಕಾರಣವಾಯಿತೆಂಬ ಭಾವನೆಯಿಂದ ಕೂಡಿ, ಬಾಲವನ್ನು ತುಳಿದ ಹಾವಿನಂತೆ, ಅವನ ಮನಸ್ಸು

ಬುಸುಗುಟ್ಟುತ್ತಿದ್ದಿತು. ನಷ್ಟಕ್ಕೆ ಗುರಿಯಾದ ವರ್ತಕನು ಗುಮಾಸ್ತೆಯ ಮೇಲೆ ರೇಗಿದನಂತೆ, ಗುಮಾಸ್ತೆಯು ಆಳಿನಮೇಲೆ ರೇಗಿದನಂತೆ, ಆಳು ಬೀದಿಯಲ್ಲಿ ಹೋಗುತ್ತಿದ್ದ ನಾಯಿಯ ಕಡೆಗೆ ಕಲ್ಲನ್ನು ಎಸೆದನಂತೆ. ಬೋರಯ್ಯನ ವರ್ತನೆಯೂ ಸ್ವಲ್ಪ ಹೆಚ್ಚು ಕಡಿಮೆ ಇದೇ ಬಗೆಯದು.

ಮರುದಿನದಿಂದ ಊರಿನವರೆಲ್ಲರೂ ಬೋರಯ್ಯನನ್ನು ಹಾಸ್ಯಮಾಡುವವರೇ ಆದರು. ಹರೆಯದ ಹೊಸಲನ್ನು ಮೆಟ್ಟುತ್ತಿದ್ದ ಹುಡುಗಿಯಾದ ನೀಲಮ್ಮನ ಮಾತುಗಳನ್ನು ಯಾರೂ ನೆನಪಿನಲ್ಲಿಡಲಿಲ್ಲ ಏನಿದ್ದರೂ ಬೋರಯ್ಯನಮೇಲೆ ಮಾತ್ರವೇ ಅವರೆಲ್ಲರ ಬಾಣ ಪ್ರಯೋಗ ದೊರೆಗಳ ಬಳಿಗೆ ಎಂದು ಪಯಣವೆಂದು ಕೆಲವರು, ದೊರೆಗಳ ಅರಮನೆಯಿಂದ ಇನಾಮು ಕೊಡಿಸಬೇಕೆಂದು ಕೆಲವರು, ಅಂತು, ಹಲವು ವಿಧಗಳಲ್ಲ ಹಲವರು ಅವನನ್ನು ಹಾಸ್ಯಮಾಡತೊಡಗಿದರು ಬೋರಯ್ಯನು ಹರಗಾರನೂ ಹೌದು ಅವನು ಇದೊಂದಕ್ಕೂ ನಗ್ಗದೆ, ತಾನು ಆಡಿದಂತೆ ಅರಮನೆಯಲ್ಲಿ ಚಾಕರಿಗೆ ಸೇರಿ ಅವರೆಲ್ಲರಿಗೂ ಮೂಗು ಮುರಿಯಬೇಕೆಂದು ದೃಢ ಸಂಕಲ್ಪ ಮಾಡಿದನು ಅದನ್ನು ಕೇಳಿ ಅವನ ತಾಯಿಯು ಅತ್ತುಬಿಟ್ಟಳು ಎಂದೂ ಪರಸ್ಥಳಕ್ಕೆ ಹೋಗದ ಮಗನು ಐದು ಮಜಲು ಪಯಣದ ಮೈಸೂರಿಗೆ ಹೋಗಬೇಕೆಂದು ಛಲವನ್ನು ತೊಟ್ಟರೆ ಅವಳು ಸಹಿಸುವ ಬಗೆ ಹೇಗೆ? ನೀಲಮ್ಮನಿಗೂ ತನ್ನ ಗಂಡನು ಪರಸ್ಥಳಕ್ಕೆ ಹೋಗುವುದು ಮೊದಲು ಸಮ್ಮತವಿರಲಿಲ್ಲ ಆದರೆ, ಬೋರಯ್ಯನು ಬಡಾಯಿನ ಬ್ರಹ್ಮಪಾಶದಲ್ಲಿ ಅವಳನ್ನು ಬಿಗಿದು ಕಟ್ಟಿ ಅವಳ ಮನಸ್ಸನ್ನು ನಿರಾಯಾಸವಾಗಿ ಸೆರೆಹಿಡಿದನು "ಶಾನುಭೋಗರ ಮನೆಯ ಸೀರೆಯ ಅಪ್ಪನಂಥ ಹಸರು ಸೀರೇನ ತಂದು ಕೊಡ್ತೀನಿ" ಎಂಬ ಶಪಥವೇ ಅವನು ಉಪಯೋಗಿಸಿದ ಮೋಹನಾಸ್ತ್ರ

ಹೊಲಗದ್ದೆಗಳ ವ್ಯವಸಾಯದ ಕೆಲಸವು ಪೂರೈಸಿದ್ದಿತು ಆದಕಾರಣ, ಬೋರಯ್ಯನ ಮನೆಯಲ್ಲಿ ಆರು ತಿಂಗಳಿಗೆ ಸಾಕಾಗುವಷ್ಟು ದವಸ ತುಂಬಿದ್ದಿತು ವರುಷದಲ್ಲಿ ಉಳಿದ ಆರು ತಿಂಗಳ ಕಾಲ ಅವರಿಗೆ ಕೂಲಿಯಿಂದ ಜೀವನ ತಾನು ಅರಮನೆಯಲ್ಲಿ ಕೆಲಸ ಸಂಪಾದಿಸಿದರೆ ತಮ್ಮ ಸಂಸಾರದ

ಕಾರ್ಪಣ್ಯವು ಕೊನೆಗಾಣುವುದೆಂಬ ಆಸೆಯು ಅವನ ಉತ್ಸಾಹವನ್ನು ಮತ್ತಷ್ಟು ಹುರಿಗೊಳಿಸಿತು. ಅವನು ಪ್ರಯಾಣ ಹೊರಡುವ ದಿನವೂ ಓಡಿಬಂದಿತು. ಅತ್ತೆ ಸೊಸೆಯರಿಬ್ಬರೂ ವಿಧವಿಧದ ತಿಂಡಿಗಳನ್ನು ಮಾಡಿ, ಅವನಿಗೆ ಬುತ್ತಿಯನ್ನು ಕಟ್ಟಿಕೊಟ್ಟರು. ಬೋರಯ್ಯನು ಹೊರಟೇ ಹೋದನು. ಅವನ ಆಪ್ತರು ಸ್ವಲ್ಪ ದೂರ ಅವನೊಡನೆ ಹೋಗಿ ಹರಸಿ ಹಿಂದಿರುಗಿದರು. ಅಂದು ಎಲ್ಲರೂ ಅವನ ಹುಮ್ಮಸ್ಸನ್ನು ಹೊಗಳುವವರೇ ಆಗಿದ್ದರು. ಅವರೆಲ್ಲರೂ ಹಿಂದಿರುಗಿದಮೇಲೂ ಬೋರಯ್ಯನ ತಾಯಿಯು ಮಗನ ಹಿಂದೆಯೇ ಹೋದಳು. ನೀಲಮ್ಮನಿಗೂ ಅವಳೊಡನೆ ಹೋಗಿ ಬರಬೇಕೆಂಬ ಇಷ್ಟವಿದ್ದಿತು. ಆದರೆ ಸರಿಯವರು ಚಿಕ್ಕವಳಾದ ತನ್ನನ್ನು, ಗಂಡುಬೀರಿಯೆಂದು ಹಳಿಯಬಹುದೆಂಬ ಭಯದಿಂದ ಅವಳು ಮನೆಯಲ್ಲಿಯೇ ನಿಂತುಬಿಟ್ಟಳು. ಅತ್ತ, ಬೋರಯ್ಯನು ತೋಪಿನಿಂದ ಮರೆಯಾಗುವವರೆಗೂ, ಅವನ ತಾಯಿಯು ಅವನನ್ನೇ ನೋಡುತ್ತಿದ್ದಳು. ಅವಳ ಅಂಕೆಗೆ ಸಗ್ಗದೆ ಅವಳ ಕಣ್ಣುಗಳಿಂದ ನೀರು ಹರಿಯುತ್ತಿದ್ದಿತು. ಅವಳು ಮಗನನ್ನು ಹಿಂದಕ್ಕೆ ಕರೆದಳು. ಬೋರಯ್ಯನು ಹಿಂದಕ್ಕೆ ಬಂದು, "ಏನವ್ವಾ ಕರೆದೆ?" ಎಂದನು. ಅವಳು, "ಸುಮ್ಮನೆ ಕರೆದೆ ಕಣೋ ಮಗಾ! ಹೋಗಿ ಬಾರಪ್ಪಾ" ಎಂದು ಹೇಳಿ, ಆದರದಿಂದ, ಅವನ ತಲೆಯನ್ನು ಸವರಿದಳು. ಆದರೆ, ಅವಳ ಕಣ್ಣೀರೇ ಅವನಿಗೆ ಸರಿಯಾದ, ಉತ್ತರವನ್ನು ಹೇಳಿತು.

ಒಂದು ದಿನ ಮಧ್ಯಾಹ್ನದ ಮೇಲೆ ಸುಮಾರು ಮೂರು ಗಂಟೆಯ ಹೊತ್ತು. ಆಗ ಮೈಸೂರಿಗೆ ಒಂದು ಕುದುರೆಯ ಬಂಡಿಯು ಬಹಳ ವೇಗವಾಗಿ ಬರುತ್ತಿದ್ದಿತು. ತಮ್ಮ ಬಲವನ್ನು ತೋರಿಸಿ ತಮ್ಮ ಸ್ವಾಮಿಯನ್ನು ಸೇವಿಸಬೇಕೆಂಬ ಕುತೂಹಲದಿಂದಲೋ ಎಂದು ತೋರುವ ಹಾಗೆ ಬಂಡಿಗೆ ಕಟ್ಟಿದ್ದ ಕುದುರೆಗಳೆರಡೂ ಉತ್ಸಾಹದಿಂದ ಓಡುತ್ತಿದ್ದುವು. ಬಂಡಿಯನ್ನು ನಡೆಯಿಸುತ್ತಿದ್ದವನಿಗೂ ಅದನ್ನು ಕಂಡು ಅತ್ಯಾನಂದವಾಯಿತು. ಬಂಡಿಯ ವೇಗದ ದೆಸೆಯಿಂದ ಮಾರ್ಗದ ಮರಗಳೇ ಓಡಿಹೋಗುತ್ತಿರುವಂತೆ ಕಾಣುತ್ತಿದ್ದಿತು. ಇದು ಬಂಡಿಯಲ್ಲಿ ಕುಳಿತಿದ್ದವರ ಮಾತಾಯಿತು. ಮಾರ್ಗದ

ಬಳಿಯಲ್ಲಿ ನಿಂತು ಹೊರಗಿನಿಂದ ನೋಡುತ್ತಿದ್ದವರಿಗೆ ಮತ್ತೊಂದು ವಿಧದಲ್ಲಿ ವೇಗದ ಅನುಭವವು ತೋರುತ್ತಿದ್ದಿತು ಕುದುರೆಗಳು ತಮ್ಮ ಗೊರಸುಗಳ ಹೊಡೆತದಿಂದ ಮೇಲಕ್ಕೆದ್ದ ಧೂಳಿಯು ತಮ್ಮ ಮೈಗೆ ಸೋಕುವುದಕ್ಕೆ ಮೊದಲೇ ದೂರಕ್ಕೆ ಹೊರಟುಹೋಗುತ್ತಿರುವಂತೆ ಕಾಣುತ್ತಿದ್ದಿತು ಈ ಮಧ್ಯದಲ್ಲಿ ಇದ್ದುದಿದ್ದಂತೆಯೇ ಕುದುರೆಗಳು ಬೆದರಿ ಹಾದಿಯನ್ನು ಬಿಟ್ಟು ಪಕ್ಕದಲ್ಲಿದ್ದ ಬಯಲಿಗೆ ಓಡುವ ಪ್ರಯತ್ನಮಾಡಿದುವು ಅಷ್ಟರಲ್ಲಿ, ಬಂಡಿಯ ಒಂದು ಕಡೆಯ ಚಕ್ರಗಳು ಸಮೀಪದ ಕೊರಕಲಿಗೆ ಬಿದ್ದು ಬಂಡಿಯು ವಾಲಿತು ಅದು ಮಗುಚಿಕೊಳ್ಳದಂತೆ ಮಾಡಲು, ಮಿಂಚಿನ ವೇಗದಲ್ಲಿ ಹಾರಿಬಂದ ಹರೆಯದವನೊಬ್ಬನು ಬಂಡಿಯ ಪಕ್ಕವನ್ನು ಹಿಡಿದು ಕೊಂಡುದೂ, ತಾನು ವಹಿಸಿದ್ದ ಭಾರದ ದೆಸೆಯಿಂದ ಅವನು ಮುಗ್ಗರಿಸಿ ಬೀಳುವಂತಿದ್ದುದೂ ಬಂಡಿಯನ್ನು ನಡೆಯಿಸುತ್ತಿದ್ದವನ ಕಣ್ಣಿಗೆ ಕಾಣ ಬಂದಿತು ಬಂಡಿಯ ಪಕ್ಕವನ್ನು ಹಿಡಿದು ನಿಂತಿದ್ದವನು ನಮ್ಮ ಬೋರ ಯ್ಯನೇ ಚಕ್ರವು ಅವನ ಕಾಲಿಗೆ ತಗುಲಿ ಮುಂಗಾಲು ಜಜ್ಜಿದಂತಾಗಿ ರಕ್ತವು ಹರಿಯುತ್ತಿದ್ದಿತು ಎರಡು ಅಂಗೈಗಳ ಚರ್ಮವೂ ತರೆದುಹೋಗಿ ಅಂಗೈಗಳ ಮಾಂಸಖಂಡದಿಂದಲೂ ರಕ್ತವು ಹರಿಯುತ್ತಿದ್ದಿತು ಆದರೂ ಅವನು ಹೊರೆಯನ್ನಿಳಿಸದೆ "ಗಾಡಿಯಲ್ಲಿರೋರು ಬೇಗ ಇಳೀಬೇಕು, ನಾನು ಸತ್ತೆ, ಚಕ್ರ ಹೋಯ್ತು ಅಬ್ಬಾ! ಸತ್ತೆ! ಸತ್ತೆ! ಬೇಗ, ಬೇಗ, ಬೇಗ ಇಳೀಬೇಕು!" ಎಂದು ಅಬ್ಬರಿಸಿ ನೋವನ್ನು ತಾಳಲಾರದೆ ಕೂಗಿ ಕೊಂಡನು ಹೀಗೆ ಅಬ್ಬರಿಸಿದುದನ್ನು ಕೇಳಿ, ಮೊದಲೇ ಬೆದರಿದ್ದ ಕುದುರೆ ಗಳು ಮತ್ತಷ್ಟು ಬೆದರಿ ಕಾಲನ್ನು ಹಾರಿಸಿ ಒದೆದುವು ಅವು ಒದೆದಾಗ ಒಂದು ಕುದುರೆಯ ಕಾಲು ಬೋರಯ್ಯನ ಮೈಗೆ ತಗುಲಿತು ಬಂಡಿಯಲ್ಲಿ ದ್ದವರು ಕೆಳಕ್ಕಿಳಿಯುವುದೂ ತಡವಾಗಲಿಲ್ಲ ಅವರು ಇಳಿದೊಡನೆಯೇ ಬೋರಯ್ಯನು ಕೈಬಿಟ್ಟು ಹಿಂದಕ್ಕೆ ಉರುಳಿದನು ಬಂಡಿಯನ್ನು ನಡೆಯಿಸು ತ್ತಿದ್ದವನು ಅಷ್ಟರಲ್ಲಿ ಕೆಳಕ್ಕೆ ಹಾರಿಬಂದು ಅವನನ್ನು ಹಿಡಿದುಕೊಂಡನು ಎರಡು ಮೂರು ನಿಮಿಷಗಳಲ್ಲಿ ಇಷ್ಟೊ ನಡೆದುಹೋಯಿತು ಕುದುರೆ ಗಳನ್ನು ಬಿಚ್ಚಿದುದೂ ಆಯಿತು, ಬಂಡಿಯನ್ನು ಎತ್ತಿ ನಿಲ್ಲಿಸಿದುದೂ

ಆಯಿತು ರಾಜಮಾರ್ಗಕ್ಕೆ ಅಡ್ಡವಾಗಿ ಸಾಲುಮರಗಳಿಗೆ ಮಾವಿನ ಸೊಪ್ಪಿನ ಕೊನೆಗಳ ತೋರಣ ಕಟ್ಟಿದ್ದರು ಅದು ಯಾವಾಗಲೋ ಕಟ್ಟಿದ ತೋರಣ ಸೊಪ್ಪು ಒಣಗಿ ಹೋಗಿದ್ದ ಆ ತೋರಣದ ಮೇಲೆ ಒಂದು ಕೋತಿಯು ಹಾರಿ ಇಷ್ಟು ಹಗರಣಕ್ಕೂ ಮೂಲವಾಯಿತು ಅದು ಹಾರಿದ ರಭಸಕ್ಕೆ ತೋರಣದ ಹಳೆಯ ಹುರಿಯು ಕಿತ್ತುಹೋಗಿ, ಕಡಿದುಹೋದ ತೋರಣವು 'ಪರಪರ' ಎಂಬ ಶಬ್ದದಿಂದ ಸರಕ್ಕನೆ ಕುದುರೆಗಳ ಮುಖಗಳಿಗೆ ತಗುಲಿ ಕೆಳಕ್ಕೆ ಬಿದ್ದಿತು ಈ ಕಾರಣದಿಂದಲೇ ಕುದುರೆಗಳು ಅಷ್ಟು ಬೆದರಿ, ದಿಕ್ಕೆಟ್ಟು ಓಡುವುದಕ್ಕೆ ಮೊದಲಿಟ್ಟುದುದು! ಬೋರಯ್ಯನು, "ನಂಜಪ್ಪನ್ನ ನೋಡಿ, ಅವನನ್ನು ಕೇಳೋದೊಂದೇ ಇನ್ನು ಉಳಿದಿತ್ತು, ಅದೂ ಮುಗಿದಮೇಲೆ ನನ್ನ ದಾರಿ ನಂಗೆ ಅಂತಿದ್ದೆ, ಅದಕ್ಕೂ ಕಲ್ಲು ಬಿತ್ತು, ಕೆಲಸ ಕೆಟ್ಟೇ ಹೋಯ್ತು" ಎಂದುಕೊಂಡನು

* * * * *

ಅಂದು ರಾತ್ರಿ ಬೋರಯ್ಯನಿಗೆ ಬಹಳ ಹಿಂಸೆ ಅವನು ಗಟ್ಟಿಯಾಗಿ ನರಳುತ್ತ, "ನಂಜಪ್ಪಾ! ನಂಜಪ್ಪಾ! ನಿನ್ನಿಂದ ಉಪಕಾರವಾಗ್ತದೆ, ಎಷ್ಟೋ ಸಹಾಯವಾಗ್ತದೆ ಎಂದಿದ್ದೆನಲ್ಲಪ್ಪಾ! ನನಗೆ ಈಗಲೇ—ನನ್ನ ಕೆಲಸ ನೀನು ಮಾಡಿ ಕೊಡೋಕೆ ಮೊದಲೇ—ಇಂಥಾ ಹೊತ್ತು ಬಂತಲ್ಲಪ್ಪಾ" ಎಂದು ಮುಂತಾಗಿ ಹೇಳಿಕೊಂಡು ಅವನು ವ್ಯಥೆಪಟ್ಟನು ಕೊನೆಗೆ, ಬಂಡಿಯನ್ನು ಹೊಡೆದವನೊಡನೆ, "ನಿಮ್ಮ ಧಣಿ ಮಹಾರಾಯರು, ಅವರ ಹೊಟ್ಟೆ ತಣ್ಣಗಿರಲಿ! ಆ ನಮ್ಮಪ್ಪ ನೂರು ವರುಸ ಬದುಕಿರಲಿ, ನನಗೆ ಎಷ್ಟು ಉಪಕಾರ ಮಾಡಿಸ್ತಾ ಇದ್ದಾರೆ. ಇಂಥಾ ಜನರಿರೋ ಹೊತ್ತಿಗೇ ಮತ್ತೆ ಮಳೆ ಬೆಳೆ ಆಗೋದು" ಎಂದು ಹೇಳಿದನು ಯಥಾಕಾಲದಲ್ಲಿ ಬೋರಯ್ಯನ ಗಾಯಗಳು ಮಾಯುತ್ತ ಬಂದುವು ಅವನು ಹಾಸಿಗೆಯಲ್ಲಿ ಎದ್ದು ಕುಳಿತುಕೊಳ್ಳುವ ಮಟ್ಟಿಗಾಯಿತು ಆ ವೇಳೆಗೆ ಅವನಿಗೂ ಆ ಬಂಡಿ ಹೊಡೆಯುವವನಿಗೂ ಸ್ನೇಹವುಂಟಾಯಿತು ಒಂದು ದಿನ ಬೋರಯ್ಯನು ತನ್ನ ಗೆಳೆಯನೊಡನೆ, "ಆ ಗಾಡಿ ಏನು ರುಸ್ತುಂ ಗಾಡಿಯಯ್ಯಾ! ಏನು ರುಸ್ತುಂ ಗಾಡಿ! ನಿಮ್ಮ ಯಜಮಾನರು ತುಂಬ ಸಾಹು

ಕಾರರಿರಬೇಕು!" ಎಂದನು. ಅದಕ್ಕೆ ಅವನು. "ಸಾಹುಕಾರರಂತೆ! ಅವರು ಸಾಹುಕಾರರಲ್ಲವೊ! ಸವಾರಿ, ಸವಾರಿ!" ಎಂದು ಉತ್ತರ ಹೇಳಿದನು ಬೋರಯ್ಯನಿಗೆ ಇದು ಅರ್ಥವಾಗಲಿಲ್ಲ. ಅವನು, "ಹಂಗೋ! ನೀನು ಬಾಡಿಗೆ ಗಾಡಿ ಇಟ್ಟು ಅವರಿಗೆ ಹಣಕ್ಕೆ ಸವಾರಿಬಿಟ್ಟಿದ್ದೀಯೋ?" ಎಂದನು ಬೋರಯ್ಯನ ಜೊತೆಗಾರನು ನಕ್ಕು ನಕ್ಕು ಸಾಕಾಗಿ, "ನೀನೆಲ್ಲೋ ಹಳ್ಳಿಗಾಡು ಮುಕ್ಕ! ಒಂದೂ ತಿಳಿಯದು ಅವರು ನಿನಗೂ ನನಗೂ, ಎಲ್ಲರಿಗೂ ಒಡೆಯರೋ! ಮಹಾರಾಜರು ಕಣೋ!" ಎಂದು ಉತ್ತರ ಹೇಳಿದನು ಬೋರಯ್ಯನು ಬೆಚ್ಚಿ ಬೆರಗಾದನು, ಬಹಳ ಹೊತ್ತು ಅವನಿಂದ ಮಾತೇ ಹೊರಡಲಿಲ್ಲ, ಅದು ಸ್ವಾಭಾವಿಕವೂ ಹೌದು

ತಾನು ಚಿತ್ರದಲ್ಲಿ ಮಹಾಸ್ವಾಮಿಯವರನ್ನು ನೋಡಿದ್ದರೂ ಅವರ ಗುರುತು ಸಿಕ್ಕದೆ ಹೋದುದೇಕೆಂಬುದು ಬೋರಯ್ಯನ ಸಮಸ್ಯೆ ತಾನು ಹದಿನಾರಾಣೆಯ ಮಂಕನೆಂದೇ ಅವನು ನಿರ್ಧರಿಸಿಕೊಂಡನು ಪ್ರಭುಗಳವರು ಅಂದು ಒಡ್ಡೋಲಗದ ವೈಭವಕ್ಕೆ ಸರಿಯಾದ ಕಿಂಕಾಪಿನ ಉಡುಪನ್ನು ಧರಿಸಿ ದಿವ್ಯಾಭರಣಗಳನ್ನು ತೊಟ್ಟಿರಲಿಲ್ಲ ಪ್ರಜೆಗಳ ಕಷ್ಟ ಸುಖಗಳನ್ನು ಸ್ವತಃ ಪರಾಂಬರಿಸಿಕೊಂಡು ಬರುವುದಕ್ಕಾಗಿ ಅವರು ಸಾಮಾನ್ಯವಾದ ಉಡುಪನ್ನು ಧರಿಸಿ, ಸಾಧಾರಣ ಜನರಂತೆ ಬಿಜಯಮಾಡಿದ್ದರು ಇದಲ್ಲದೆ, ಬೋರಯ್ಯನಿಗೆ ಅಂದು ಸಹಿಸಲಶಕ್ಯವಾದ ಯಾತನೆ! ಆದುದರಿಂದ, ಪ್ರಭುಗಳನ್ನು ಚೆನ್ನಾಗಿ ದೃಷ್ಟಿಸಿ ನೋಡುವ ಸ್ಥಿತಿಯಲ್ಲಿಯೂ ಅವನು ಇರಲಿಲ್ಲ ಆದಕಾರಣ, ಅವನು ಪೂರ್ತಿಯಾಗಿ ಹದಿನಾರಾಣೆಯ ಮಂಕನಲ್ಲವೆಂದು ತೋರುತ್ತದೆ

ಬೋರಯ್ಯನು ತನಗೆ ಮತ್ತೆ ಮಹಾಪ್ರಭುಗಳ ಸಂದರ್ಶನವು ಲಭಿಸೀತೇ ಎಂದು ತವಕಪಡುತ್ತಿದ್ದನು ಅಷ್ಟರಲ್ಲಿ, ಮಹಾಸ್ವಾಮಿಯವರಿಗೆ ಅವನು ಯಾವ ಉದ್ದೇಶದಿಂದ ಮೈಸೂರಿಗೆ ಬಂದಿದ್ದನೆಂಬುದು ತಿಳಿದು, ಅವನಿಗೆ ಅರಮನೆಯಲ್ಲಿ ಒಳ್ಳೆಯದೊಂದು ಊಳಿಗವು ದೊರೆಯಿತು. ಆದರೂ ಅವನಿಗೆ ತೃಪ್ತಿಯಿಲ್ಲ. ಮೂರು ಆಸೆಗಳು ಅವನಿಗಿದ್ದುದೇ ಅದಕ್ಕೆ ಕಾರಣ. ತಾನು ಪ್ರಭುಗಳ ದರ್ಶನವನ್ನು ಪಡೆಯಬೇಕೆಂಬುದೊಂದು;

ನಂಜಪ್ಪನನ್ನು ಕಂಡು ಅವನಿಗೆ ತನ್ನ ಸೌಖ್ಯದ ವರದಿಯನ್ನು ಒಪ್ಪಿಸ ಬೇಕೆಂಬುದೊಂದು, ಊರಿನಿಂದ ತಮ್ಮ ತಾಯಿಯನ್ನೂ ಹೆಂಡತಿಯನ್ನೂ ಕರೆದುಕೊಂಡು ಬರಬೇಕೆಂಬುದೊಂದು, ಇವು ಮೂರೂ ಅವನ ಮನಸ್ಸಿನಲ್ಲಿದ್ದ ಬಯಕೆಗಳು ಆದರೂ, ಒಡನೆಯೇ ಊರಿಗೆ ಹೋಗಲು ಅವನಿಗೆ ಇಷ್ಟವಿರಲಿಲ್ಲ ಅವನ ಬಡಾಯಿಯ ಬುದ್ಧಿಯು ಅಡ್ಡ ಬಂದುದೇ ಅದಕ್ಕೆ ಕಾರಣ ಊರಿನ ವಸ್ತ್ರಾದಿಯು ಬಡಕಲು ಬೋರನಾಗಿ ಹೋದವರುಂಟೆ? ಖಂಡಿತವಾಗಿಯೂ ಕೂಡದು ಈ ಸಂಬಂಧದಲ್ಲಿ ಬೋರಯ್ಯನಿಗೆ ಕೆಲವು ಸವಿಗನಸುಗಳೂ ಬಿದ್ದುವು ಅವುಗಳಲ್ಲಿ ಕೆಲವನ್ನು ಇಲ್ಲಿ ಅರಿಕೆಮಾಡುತ್ತೇನೆ —(೧) ಅಂಗಸಾಧನೆಯಿಂದ ಮೊದಲಿಗಿಮ್ಮಡಿಯಾಗಿ ಮೈಯನ್ನು ಕೊಬ್ಬಿಸಿಕೊಂಡೇ ಊರಿಗೆ ಹೋಗಬೇಕು, (೨) ಮಹಾರಾಜರವರೇ ಸ್ವಂತವಾಗಿ ತಾನು ಸಾಮು ಮಾಡಿದುದನ್ನು ಪರಾಂಬರಿಸಿ ಮೋತೀಖಾನೆಯಿಂದ ತನಗೆ ಖುಸ್ವತ್ತಿಗೆ ಖಾಸಾ ಲವಾಜಮೆಯನ್ನು ಕೊಡಿಸಬೇಕೆಂದು ಅಪ್ಪಣೆ ಮಾಡಿದ್ದಾರೆಂದು ಊರಿನಲ್ಲಿ ಎಲ್ಲರಿಗೂ ಹೇಳಿಕೊಳ್ಳಬೇಕು, ಇದಲ್ಲದೆ, ಮೋತೀಖಾನೆಯಲ್ಲಿ ಜೇನುತುಪ್ಪದ ಗುಡಾಣಗಳಲ್ಲಿ ಉತ್ತಮವಾದ ಮಾವಿನ ಹಣ್ಣುಗಳನ್ನು ಊರಹಾಕಿಟ್ಟಿದ್ದಾರೆಂದೂ, ಅವುಗಳಲ್ಲಿ ಪ್ರತಿದಿನವೂ ತನಗೊಂದು ಹಣ್ಣನ್ನು ಕೊಡುವಂತೆ ಕೂಡ ಬಕ್ಷಿಯವರೇ ಖುದ್ದಾಗಿ ಅಪ್ಪಣೆ ಮಾಡಿದ್ದಾರೆಂದೂ, ಹಿಂದೆ ತನ್ನನ್ನು ಹಾಸ್ಯಮಾಡಿದ್ದವರಿಗೆ ಹೇಳಿ ಅವರ ಹೊಟ್ಟೆಯು ಚುರು ಚುರುಗುಟ್ಟುವ ಹಾಗೆ ಮಾಡಬೇಕು, (೩) ನೀಲಮ್ಮನು ತನ್ನಲ್ಲಿ ಈಗಿನ ಅಂತಸ್ತಿಗೆ ತಕ್ಕಂತೆ, ಹೆಚ್ಚು ಗೌರವದಿಂದ ನಡೆಯುವ ಹಾಗೆ ದರ್ಪದಿಂದ ಅವಳ ಮೇಲೆ ಅಧಿಕಾರವನ್ನು ಚಲಾಯಿಸಬೇಕು, ಇತ್ಯಾದಿ, ಇತ್ಯಾದಿ

ಬೋರಯ್ಯನಿಗೆ ಪ್ರಭುಗಳ ದರ್ಶನವು ಇನ್ನೂ ಲಭಿಸಿರಲಿಲ್ಲ ಅವನು ಅದಕ್ಕಾಗಿಯೇ ಕಾದುಕೊಂಡಿದ್ದನು ತನ್ನ ಊಳಿಗದ ಕೆಲಸದ ಜೊತೆಗೆ, ವಿರಾಮಕಾಲಗಳಲ್ಲಿ ನಡೆಯಬೇಕಾಗಿದ್ದ ಸ್ವಯಂಪಾಕ, ದಂಡೆಗಳು, ಬೈಸಿಗೆಗಳು, ಮುಂತಾದವುಗಳ ಅವಾಂತರದಲ್ಲಿ 'ನಂಜಪ್ಪ'ನನ್ನು ನೋಡುವುದಕ್ಕೆ ಅವನಿಗೆ ಅವಕಾಶವೇ ದೊರೆಯಲಿಲ್ಲ ತಮ್ಮ ಊರಿಗೆ ತಕ್ಕ ವಸ್ತ್ರಾದಿ

ಯೆನ್ನಿಸಿಕೊಳ್ಳುವಂತಾದಲ್ಲದೆ ಅವನು ಮೈಸೂರನ್ನು ಬಿಡುವಹಾಗಿರಲಿಲ್ಲ. ಆದಷ್ಟು ಬೇಗ ಊರಿಗೆ ಹೊರಡಬೇಕೆಂಬ ಆಸೆಯಿಂದ ಅವನು ತಿನಿಕಿ ತಿನಿಕಿ ಕಸರತ್ತನ್ನು ಮಾಡುತ್ತಿದ್ದನು ಅವನ ಮೈಯೂ ಗುಂಡು ಹಲಸಿನ ಹಣ್ಣಿನಂತೆ ದುಂಡಗೆ ಮಾಟವಾಗಿ ತಿರುಗುತ್ತ ಬಂದಿತು ಹೊಸದಾಗಿ ದೊಡ್ಡ ಕೆಲಸವಾದವರಿಗೆ ಕುದುರೆಯ ಪೋಷಣೆಯಲ್ಲಿ ಎಷ್ಟು ಶ್ರದ್ಧೆಯೋ, ನಮ್ಮ ಬೋರಯ್ಯನಿಗೆ ಹೊಟ್ಟೆಯ ಪೋಷಣೆಯಲ್ಲಿಯೂ ಅಷ್ಟೇ ಶ್ರದ್ಧೆ ಸದ್ಯಕ್ಕೆ ಅವನ ಸಂಬಳಕ್ಕೆಲ್ಲ ಅವನ ಹೊಟ್ಟೆಯೊಂದೇ ಸರ್ವಾಧಿಕಾರಿ ಮಾಂಸಖಂಡಗಳು ಉಬ್ಬಿಕೊಂಡು ಜುಬ್ಬವು ಇನ್ನೂ ಬಿಗಿಯಾಗಲಿಲ್ಲವಲ್ಲಾ ಎಂಬುದೇ ಅವನ ಕಳವಳ ಅವನು ಅತ್ಯಾಶೆಯಿಂದ ದೊಗಲೆ ದೊಗಲೆ ಯಾಗಿ ಜುಬ್ಬವನ್ನು ಹೊಲಿಸಿಕೊಂಡುದಕ್ಕೆ ಮಾಂಸಖಂಡಗಳು ಹೊಣೆಯೇ? ಆದರೂ, ಪದೇಪದೇ ಮೈಯನ್ನು ನೋಡಿಕೊಳ್ಳುವುದೇ ಅವನ ಕೆಲಸ. ಕಸರತ್ತಿನ ದಿನಚರಿಯ ಕ್ರಮವಂತು, ವರಮಾನವು ಹೆಚ್ಚುತ್ತ ಬಂದ ಪೂಜಾರಿಯ ದೇವತಾರ್ಚನೆಯ ಕಲಾಪದಂತೆ, ಮೇಲಿನಿಂದ ಮೇಲೆ ಅಭಿವೃದ್ಧಿಯಾಗುತ್ತ ಬಂದಿತು ಸ್ವಲ್ಪ ಕಾಲದಲ್ಲೇ ಅವನ ದೇಹದ ಅಂಗಾಂಗಗಳೂ ತುಂಬಿಕೊಳ್ಳುತ್ತ ಬಂದುವು ಇನ್ನು ಅವನು ಊರಿಗೆ ಹೊರಡಬೇಕೆಂದಿರುವ ವೇಳೆಗೆ ಅವನ ತಾಯಿಯೂ ಹೆಂಡತಿಯೂ ಬಾಡಿ ಗೆಯ ಬಂಡಿಯಲ್ಲಿ, ಐದು ಮಜಲು ಪ್ರಯಾಣದ ಮೈಸೂರಿಗೇ ಬಂದು ಬಿಟ್ಟರು ಬೋರಯ್ಯನ ಗತಿ ಏನಾಯಿತೋ ನೋಡಬೇಕೆಂಬ ಕುತೂ ಹಲದಿಂದ ಅವರು ಅಲ್ಲಿಗೆ ಬಂದುಬಿಟ್ಟರು ಅವರು ಅಷ್ಟು ದೊಡ್ಡ ಊರಿ ನಲ್ಲಿ ಬೋರಯ್ಯನನ್ನು—ಅದೂ ಅವನು ಬದುಕಿದ್ದರೆ—ಪತ್ತೆ ಮಾಡುವ ಬಗೆ ಹೇಗೆಂಬುದನ್ನೇ ಚಿಂತಿಸುತ್ತ ಕಳವಳಪಡುತ್ತಿದ್ದರು ಆದರೆ ಅವರ ಬಂಡಿಯು ಊರು ಹೊರಗಿನ ಉಕ್ಕಡದ ಬಳಿಗೆ ಬರುವಾಗ್ಗೆ ಬೋರಯ್ಯನೇ ಅವರಿಗೆ ಸಿಕ್ಕಬೇಕೆ! ಇಂತಹುದಕ್ಕೇ ನಾವು ದೈವಾಯತ್ತವಾದ ಘಟನೆ ಯೆನ್ನುವುದು! ಅದನ್ನು ಕಂಡು ಬೋರಯ್ಯನಿಗೆ ಸಂತೋಷದ ಜೊತೆಗೆ ಸ್ವಲ್ಪ ಅಸಮಾಧಾನವೂ ಆಯಿತು ತನ್ನ ಸವಿಗನಸುಗಳು ಸಾರ್ಥಕ್ಯ ಹೊಂದಿ ಕಾರ್ಯರೂಪಕ್ಕೆ ಬರುವುದಕ್ಕೆ ಮೊದಲೇ ಅವರು ಬಂದುಬಿಟ್ಟ

ರಲ್ಲಾ ಎಂಬುದೇ ಅವನ ಅಸಮಾಧಾನಕ್ಕೆ ಕಾರಣ; ಆದರೂ, ಸಂತೋಷದ ಪ್ರವಾಹದಲ್ಲಿ ಅಸಮಾಧಾನವು ಎಲ್ಲಿಯೋ ಕೊಚ್ಚಿಹೋಯಿತು ಬಡಾಯಿ ಹೇಳಿಕೊಳ್ಳುವುದನ್ನು ಬಿಟ್ಟರೆ, ಉಳಿದ ಗುಣಗಳಲ್ಲಿ ಬೋರಯ್ಯನ ಸಮಾನರಿಲ್ಲ ಅದೊಂದು ದೋಷವೇ ನಮಗೇಕೆ ಪ್ರಧಾನವಾಗಬೇಕು? ಅವನ ರಾಜಭಕ್ತಿ, ಕರ್ತವ್ಯನಿಷ್ಠೆ—ಇವೆರಡು ಗುಣಗಳೇ ಸಾಕು, ನೂರು ದೋಷಗಳನ್ನಾದರೂ ಮರೆಯಲು ಅವೆರಡೇ ಸಾಕು

ಕೆಲವು ದಿನಗಳು ಕಳೆದುವು ಹಸುರು ಸೀರೆಗೆ ತಗಾದೆ ಬಲವಾದಷ್ಟೂ ಬೋರಯ್ಯನ ಬಡಾಯಿ ಹೆಚ್ಚಿತು ಈ ಮಧ್ಯದಲ್ಲಿ ತನ್ನ ಬಡಾಯಿಯ ದೆಸೆಯಿಂದ ಬೋರಯ್ಯನು ಒಂದು ತೊಡಕಿನಲ್ಲಿ ಸಿಕ್ಕುಬಿದ್ದು ದೊಡ್ಡ ಸಂಕಟವನ್ನೇ ತಂದುಕೊಂಡನು ಬಡಾಯಿ ಹೇಳಿಕೊಳ್ಳುವುದರಲ್ಲಿ ಅವನು ಯಾವ ವಿಚಾರವನ್ನೂ ಮಾಡದೆ ನಡೆಯುತ್ತಿದ್ದನೆಂಬುದನ್ನು ತೋರಿಸುವುದೊಂದು, ಮುಂದೆ ಹಸುರು ಸೀರೆಯ ಸಂಬಂಧದ ರಗಳೆಯಲ್ಲಿ, ಅವನ ಬಡಾಯಿಯಲ್ಲಿ ನಂಬಿಕೆ ತೋರುವಷ್ಟುಮಟ್ಟಿನ ಪ್ರಾಬಲ್ಯವು ಅವನಿಗೆ ದೊರೆತಿದ್ದಿತೆಂಬುದು ತೋರಿಸುವುದೊಂದು—ಇವೆರಡೂ ಉದ್ದೇಶಗಳಿಂದ, ಮೇಲೆ ಹೇಳಿದ ವಿಚಾರವನ್ನು ಇಲ್ಲ ಸಂಕ್ಷೇಪವಾಗಿ ಅರಿಕೆಮಾಡುತ್ತೇನೆ ಪಂಜಾಬಿನಿಂದ ದೊಡ್ಡ ಪೈಲವಾನನೊಬ್ಬನು ಮೈಸೂರಿಗೆ ಬಂದನು ಕುಸ್ತಿ ಮಾಡುವವರಲ್ಲ ಅವನಿಗಿದ್ದ ಹೆಸರುವಾಸಿಯು ಅಷ್ಟಿಷ್ಟಲ್ಲ ಮೈಸೂರಿನಲ್ಲಿಯೂ ಅನೇಕ ಮಂದಿ ಹೆಸರಾದ ಜಟ್ಟಿಗಳಿದ್ದರು ಹೊರಗಿನ ಪೈಲವಾನನ ಮೇಲೆ, ಅವನ ಕೋರಿಕೆಯ ಪ್ರಕಾರವೇ, ಮೈಸೂರಿನ ಜಟ್ಟಿಗಳೂ ಒಬ್ಬೊಬ್ಬರಾಗಿ ಕುಸ್ತಿಗೆ ಪ್ರಾರಂಭಿಸಿದರು ಅವರಲ್ಲ ಎಲ್ಲರನ್ನೂ ಸೋಲಿಸಬೇಕೆಂಬುದು ಪೈಲವಾನನ ಸಂಕಲ್ಪ, ತಮ್ಮಲ್ಲಿ ಯಾರಾದರೂ ಒಬ್ಬನು ಅವನನ್ನು ಸೋಲಿಸಬೇಕೆಂಬುದು ಮೈಸೂರಿನ ಜಟ್ಟಿಗಳ ಛಲ ಅಂತು, ಪೈಲವಾನನಮೇಲೆ ನಡೆಯುತ್ತಿದ್ದ ಕುಸ್ತಿಯ ಅವಾಂತರವೇ ಅವಾಂತರ! ಜನಗಳ ಸಂದಣಿಯಂತು ಹೇಳತೀರದು ದೊಡ್ಡ ಪಟ್ಟಣಗಳಿಗೆ ಅದ್ಭುತವಾದ "ಸೀನರಿ"ಗಳನ್ನು ತೋರಿಸುವ ನಾಟಕದವರು ಬಂದಾಗ ನಡೆಯುವಂತೆ ಗದ್ದಲ! ಆದರೆ ಇದರಲ್ಲಿ ಒಂದು ವಿಶೇಷ: ಕುಸ್ತಿಗಾಗಿ ಟಿಕೀಟು

ಗಳ ಹಾರಾಟವಿಲ್ಲ; ಮೈಸೂರಿನ ತೂಕವನ್ನು ಕಾಪಾಡಬೇಕೆಂಬುದೊಂದೇ ಜಟ್ಟಿಗಳ ಉದ್ದೇಶ ನೋಟಕರು ಜಟ್ಟಿಗಳಿಗೆ ತಿಂಡಿತಿನಿಸುಗಳನ್ನು ಯಥೇಷ್ಟವಾಗಿ ಹಂಚುತ್ತಿದ್ದರು ಜಟ್ಟಿಗಳ ಸಂತೋಷಕ್ಕೆ ಪಾರವೇ ಇಲ್ಲ, ಲಾವಣಿಗಳಮೇಲೆ ಲಾವಣಿಗಳು, ಬುಬ್ಬಗಳ ಮೇಲೆ ಬುಬ್ಬಗಳು, ಬಣ್ಣ ಬಣ್ಣದ ಕಿರ್ಕಿಯ ಚಡಾವುಗಳ 'ಕೀರ್ ಕೀರ್' ದನಿ ಈ ಮಧ್ಯದಲ್ಲಿ ಬೋರಯ್ಯನು ಸುಮ್ಮನಿರಬಾರದೆ? "ಇವರು ನೆಗೆದುಬಿದ್ದು ನೇಣುಹಾಕಿಕೊಂಡರೂ ಪೈಲವಾನ ಬೇರೆ ಸೋಲೋದಿಲ್ಲಪ್ಪೋ! ನಾನು ಬೇಕಾದರೆ ಒಂದು ಕೈ ತೋರಿಸಿಬಿಟ್ಟೇನು? ನನಗೆ ಇದ್ಯಾಕೆ ಬೇಕು'" ಎಂದು ಅವರಿವರಲ್ಲಿ ಹೇಳಿಕೊಂಡನು ಇದನ್ನು ಕೇಳಿ ಎಲ್ಲರಿಗೂ ನಗು ಇವನದು ಬೊಜ್ಜು ಮೈಯೆಂದು ಅವರೆಲ್ಲರ ನಂಬಿಕೆ ಮೈಸೂರಿಗೆಲ್ಲ ದೊಡ್ಡ ರಂಗಾಜಟ್ಟಿಯೇ ಜಟ್ಟಿಗಳ ಚಕ್ರವರ್ತಿ ಪೈಲವಾನನನ್ನು ಮಣ್ಣುಮುಕ್ಕಿಸಬೇಕೆಂದಿದ್ದವನೇ ಅವನು ಬೋರಯ್ಯನ ಬಡಾಯಿ ಮಾತನ್ನು ಕೇಳಿ ಅವನು ಗಹಗಹಿಸಿ ನಕ್ಕನು, ನಗುವಿನ ರಭಸದಲ್ಲಿ ಅವನಿಗೆ ಉಸಿರು ಸಿಕ್ಕಿಕೊಳ್ಳುವಂತಾಯಿತು.

ಬೋರಯ್ಯನ ಮಾತೇ ದಿಟವಾಯಿತು. ದೊಡ್ಡ ರಂಗಾಜಟ್ಟಿಯು ಕೂಡ ಕುಸ್ತಿಯಲ್ಲಿ ಸೋತುಹೋದನು ಪೈಲವಾನನ ಅಹಂಕಾರವು ಆಕಾಶಬಾಣದಂತೆ ಮೇಲಕ್ಕೇರಿತು ಮೈಸೂರಿನ ಜಟ್ಟಿಗಳು ಕೆಲಸಕ್ಕೆ ಬಾರದವರೆಂದು ಸೂಚಿಸಿ, ಅವರಿಗೆ ಅಪಮಾನಮಾಡುವ ಉದ್ದೇಶದಿಂದ, ಮಲ್ಲಯುದ್ಧದ ಸಂಪ್ರದಾಯದ ಮೇರೆಗೆ, ಪೈಲವಾನನು ಹುಲ್ಲಿನ ಸರವಿಯ ತೋಡವನ್ನು ತನ್ನ ಕಾಲಿಗೆ ಹಾಕಿಕೊಂಡು ತಿರುಗಲು ಮೊದಲುಮಾಡಿದನು ಜಟ್ಟಿಗಳೆಲ್ಲರೂ ಅವಮಾನಭರದಿಂದ ತಲ್ಲಣಿಸಿ ತಟ್ಟುಬಿದ್ದರು ರಣಧೀರ ಕಂಠೀರವ ನರಸರಾಜ ಒಡೆಯರವರ ಕಾಲದಿಂದಲೂ ಬಂದಿದ್ದ ಕೀರ್ತಿಯು ಕಳೆಗುಂದುವಂತಾಯಿತಲ್ಲಾ ಎಂಬುದೇ ಎಲ್ಲರಿಗೂ ಮನೋವ್ಯಥೆ ದೊಡ್ಡರಂಗಾಜಟ್ಟಿಯಂತು, ಗೌರೀಶಂಕರ ಶಿಖರದ ಕೊನೆಯಿಂದ ಸಮುದ್ರತಲಕ್ಕೆ ಬಿದ್ದವನಂತಾಗಿದ್ದನು ಅವನು ಹಗಲುಹೊತ್ತು ಈಚೆಗೇ ಬರುತ್ತಿರಲಿಲ್ಲ. ಕೊನೆಗೆ, ಬಡಾಯಿ ಬೋರಯ್ಯನ ಮಾತು ಅವನ ನೆನಪಿಗೆ ಬಂದಿತು. ಸಮುದ್ರವನ್ನು ಹಾರುವ ಹನುಮಂತನು ಸಿಕ್ಕಿದನೆಂದು ಜಟ್ಟಿ

ಗಳ ಪಡೆಯ ಹಾರಾಟಕ್ಕೆ ಮೊದಲಾಯಿತು ಎಲ್ಲರೂ ಬೋರಯ್ಯನ ಬಳಿಗೆ ಹೋಗಿ ಶರಣೆಂದರು ಬೋರಯ್ಯನ ಅಂದಿನ ಇರವು ನಮ್ಮ ಶತ್ರುಗಳಿಗೂ ಬೇಡ ಅವನ ಎದೆಯು ಮದ್ದಲೆಯಂತೆ ಡವಡವನೆ ಹೊಡೆದುಕೊಳ್ಳ ಲಾರಂಭಿಸಿತು ಅವನು ಎಷ್ಟು ಸಮಾಧಾನಪನ್ನು ಹೇಳಿದರೂ ಜಟ್ಟಿಗಳು ಕೇಳಲಿಲ್ಲ "ನಮ್ಮಂತೆಯೇ ನೀನೂ ಸೋತುಬಿಡು" ಎಂಬ ದಶಾಕ್ಷರೀ ಮಂತ್ರವನ್ನು ಜಪಿಸಿ ಅವರು ಕೃತಾರ್ಥರಾದರು ಕೊನೆಗೂ ಕುಸ್ತಿಯ ಔತಣವನ್ನು ಬೋರಯ್ಯನು ಒಪ್ಪಿಕೊಳ್ಳಲೇಬೇಕಾಯಿತು ಅಷ್ಟು ದೊಡ್ಡ ಪೈಲವಾನನೊಡನೆ ಕುಸ್ತಿಮಾಡುವುದೆಂದರ ತನಗೆ ಸಾವು ಸಿದ್ಧವೆಂದು ಅವನ ಮನಸ್ಸಿಗೆ ನಿರ್ಧರವಾಗಿದ್ದರೂ, ಬಡಾಯಿ ಮಾತ್ರ ಅವನನ್ನು ಬೆನ್ನು ಬಿಡದು "ನಾಳೆ ಅಖಾಡದಲ್ಲ ನನ್ನ ಚಮಕು ನೋಡೋರಂತೆ!" ಎಂದು ಬೇರೆ ಅವನು ಎಲ್ಲರೊಡನೆಯೂ ಬಡಾಯಿ ಕೊಚ್ಚಿಕೊಂಡಿದ್ದನು ಅದು ಕೆಟ್ಟಕೆಲಸವಾಯಿತೆಂದು ಅವನು ಎಷ್ಟು ಪೇಚಾಡಿದನೆಂಬುದನ್ನು ದೇವರೊಬ್ಬನೇ ಬಲ್ಲ ನುಂಗಲಾರದ ತುತ್ತು ಬಂದೊದಗಿತಲ್ಲಾ ಎಂದು ಅವನು ಭಗವಂತನನ್ನು ಬಗೆ ಬಗೆಯಾಗಿ ಪ್ರಾರ್ಥಿಸಿಕೊಂಡನು ಹೇಗೂ ತನ್ನ ಪ್ರಾಣವು ಹೋಗುವುದು ಖಂಡಿತವೆಂದು ಅವನು ನಿಶ್ಚಯಿಸಿಕೊಂಡು, ಶತ್ರುಗಳೂ ಸೈಯೆನ್ನುವಂತೆ ಸೊಗಸಿನಿಂದ ಕುಸ್ತಿಮಾಡಿ ಸತ್ತುಬಿಡ ಬೇಕೆಂದು ಸಂಕಲ್ಪಮಾಡಿ ದೇವರ ಮೇಲೆ ಭಾರವನ್ನು ಹಾಕಿಬಿಟ್ಟನು ಹನ್ನೆರಡು ವರುಷಗಳಿಗಿಂತ ಹೆಚ್ಚು ಆಯುಸ್ಸನ್ನು ತೊಡೆಯುವುದು ಮಾರ ಮ್ಮನಿಗೇ ಶಕ್ಯವಿಲ್ಲದಿರುವಾಗ, ತನಗೆ ಆಯುಸ್ಸಿದ್ದರೆ ಈ ಬಡಬಾಯಿ ಪೈಲ ವಾನನಿಂದ ಏನುತಾನೆ ಸಾಗೀತು ಎಂದು ಸಿದ್ಧಾಂತ ಮಾಡಿದನು, ಅಲ್ಲದೆ, ತನ್ನ ವಜ್ರಾಂಗವನ್ನೂ ಮಾಂಸಖಂಡಗಳನ್ನೂ ನೋಡಿಕೊಂಡು, "ಈ ಕಲ್ಲುಮೈಯಿದ್ದೂ ದಂಡವಾದಾತ? ಒಂದು ಕೈ ನೋಡಿಬಿಡುವ! ಅವ ನೇನೂ ಕೈಲಾಸದಿಂದ ಇಳಿದುಬಂದಿಲ್ಲ" ಎಂದುಕೊಂಡನು ಅಂತು, ಇದೆಲ್ಲದರ ಪರಿಣಾಮವಾಗಿ ಕುಸ್ತಿಯು ಪ್ರಾರಂಭವಾಗುವ ವೇಳೆಗೆ ಅವನ ಎದೆಯು ಕಲ್ಲೆದೆಯಾಯಿತು. ಕಳವಳಪಡುತ್ತಿದ್ದ ತಮ್ಮ ತಾಯಿಗೂ ನೀಲಮ್ಮನಿಗೂ ಧೈರ್ಯಹೇಳಿ, ದಂಡನಾಯಕನಂತೆ ಠೀವಿಯಿಂದ ಅವನು

ಅಖಾಡಕ್ಕೆ ಹೊರಟನು. ಪ್ರಾಣವನ್ನು ಮೀಸಲಾಗಿಟ್ಟು ಕುಸ್ತಿಗೆ ಸಿದ್ಧವಾಗಿದ್ದವನು ಬೋರಯ್ಯ; ದೊಡ್ಡ ದೊಡ್ಡ ಜಟ್ಟಿಗಳನ್ನೆಲ್ಲ ಗೆದ್ದು ಸ್ವಪ್ರತಿಷ್ಠೆಯ ಮದದಿಂದ ಬೀಗುತ್ತಿದ್ದವನು ಪೈಲುವಾನ. ಆದರೆ, ಅವನದು ಬಂಡವಾಳವಿದ್ದ ಬಡಾಯಿ. ಬೋರಯ್ಯನೂ ಕಳೆದು ಹಾಕುವಂತಿರಲಿಲ್ಲ, ಪೆಟ್ಟು ಬಿದ್ದು ಜೀವದ ಮೇಲಣ ಆಸೆಯನ್ನು ತೊರೆದ ಹುಲಿಯು ತನ್ನ ಶತ್ರುವಿನ ಮೇಲೆ ಹಾರಿಬೀಳುವಂತೆ ಬೋರಯ್ಯನು ಎದುರಾಳಿಯ ಮೇಲೆರಗಿದನು. ಇಂತಹ ಭೀಮಬಲವನ್ನೂ ಇಂತಹ ಯಮಧೈರ್ಯವನ್ನೂ ಪೈಲವಾನನು ನಿರೀಕ್ಷಿಸಿರಲಿಲ್ಲ, ಆದುದರಿಂದ ಅವನು ಅಪ್ರತಿಭನಾಗಿ ಭ್ರಾಂತನಾದನು. ಅವನ ಸ್ಥಿತಿಯನ್ನು ಕಂಡು ನಮ್ಮ ಹೊಸಜಟ್ಟಿಯ ಶೌರ್ಯವು ಮೊದಲಿಗಿಮ್ಮಡಿಯಾಯಿತು. ನೋಟಕರ ಪ್ರೋತ್ಸಾಹ ವಾಕ್ಯಗಳೂ, 'ಭೇಷ್, ಭಲಾಪ್ಪ' ಎಂಬ ಸೂತ್ರವಾಕ್ಯಗಳೂ, ಅವನ ಧೈರ್ಯವನ್ನು ಮತ್ತಷ್ಟು ಹುರಿಗೊಳಿಸಿದುವು. ಜೀವದ ಹಂಗನ್ನೇ ತೊರೆದು ಬೋರಯ್ಯನು ಕುಸ್ತಿ ಮಾಡಿದನು. ಎಷ್ಟು ಹೆಣಗಿದರೂ ಪೈಲವಾನನ ಬೇಳೆಯು ಬೇಯಲಿಲ್ಲ. ಬೋರಯ್ಯನು ಆಕಸ್ಮಿಕವಾಗಿ ತನ್ನಮೇಲೆ ಬೆಟ್ಟದಂತೆ ಬಿದ್ದುದನ್ನೂ, ಅವನ ಧೈರ್ಯೋತ್ಸಾಹಗಳನ್ನೂ ಕಂಡು ಪೈಲವಾನನು ಬೆದರಿದುದೂ ಅದಕ್ಕೆ ಸ್ವಲ್ಪಮಟ್ಟಿಗೆ ಕಾರಣವಿರಬಹುದು. ಆದರೂ ಪೈಲವಾನನೂ ಧೈರ್ಯಗುಂದದೆ ಕಾದಿದನು. ಅವನ ಸಾಹಸವನ್ನೂ ಪ್ರೇಕ್ಷಕರು ಅಭಿನಂದಿಸಿ, 'ಭೇಷ್, ಭೇಷ್!' ಎಂದು ಕೂಗಿದರು. ಆಗ ಬೋರಯ್ಯನು ಸ್ವಲ್ಪ ಮಂಕುಬಿದ್ದನು. ಜಟ್ಟಿಗಳ ಹೆಸರು ಮಣ್ಣುಪಾಲಾಯಿತೆಂದು ರಂಗಾಜಟ್ಟಿಯು ತಲ್ಲಣಗೊಂಡನು. ಅವನ ಕಿವಿಯಲ್ಲಿ ಮತ್ತೊಬ್ಬನು, "ನಾವೆಲ್ಲ ಸೋತಮೇಲೆ ಈ ಹಳ್ಳಿಮುಕ್ಕ ದಿಳ್ಳಿಕಡಿದಾನಾ? ಇದು ಜಂಬದ ಕೋಳಿ, ಇದರ ಬಾಳು ಗೊತ್ತೇ ಇತ್ತು" ಎಂದನು. ಅಷ್ಟರಲ್ಲಿ ಎಲ್ಲರೂ, 'ಹೋ, ಹೋ, ಭಲಾಪ್ಪ' ಎಂದು ಮತ್ತೆ ಕೂಗಿದರು. ಬೋರಯ್ಯನು ಹುಮ್ಮಸ್ಸಿನಿಂದ ಮತ್ತೆ ಹೋರಾಡಿ, ಪೈಲುವಾನನನ್ನು ಬೆನ್ನುಮಾಡಿ ನೆಲಕ್ಕುರುಳಿಸಿದನು. ಆದರೆ ಕುಸ್ತಿಯು ಅಲ್ಲಿಗೇ ಮುಗಿಯಲಿಲ್ಲ. ಪೈಲುವಾನನು ಮೊದಲಿಗಿಂತಲೂ ಸಾಹಸಮಾಡಿ ಮತ್ತೊಮ್ಮೆ ಹೋರಾಡಿದನು.

ಆದರೂ ಈ ಸಲವೂ ಅವನೇ ಸೋತನು. ಪ್ರೇಕ್ಷಕರು ಅಭಿನಂದಿಸಿದ ಧ್ವನಿಯು ಆಕಾಶಕ್ಕೆ ಮುಟ್ಟಿತು ಪೈಲವಾನನೂ ಅವನ ಕಡೆಯವರೂ ಮಂಕಾದರು. ಆದರೂ ಅವನು ಮತ್ತೊಮ್ಮೆ ಕುಸ್ತಿಮಾಡಿದನು ಆಗಲೂ ಬೋರಯ್ಯನಿಗೇ ಜಯವಾಯಿತು ಇನ್ನು ಅಂದಿನ ಕೋಲಾಹಲವನ್ನು ಕೇಳ ಬೇಕೆ? ಅದನ್ನು ವರ್ಣಿಸುವುದಕ್ಕಿಂತ ಊಹಿಸಿಕೊಳ್ಳುವುದು ಮೇಲು ಜಟ್ಟಿಗ ಳೆಲ್ಲರೂ ಬೋರಯ್ಯನನ್ನು ಹೆಗಲಮೇಲೆ ಹೊತ್ತುಕೊಂಡು ಮೆರೆವಣಿಗೆಮಾಡಿ ದರು, ಅಂದಿನಿಂದ ತಮ್ಮೆಲ್ಲರಿಗೂ ಅವನೇ ನಾಯಕನೆಂದು ಸ್ವೀಕರಿಸಿದರು

ಬಡಾಯಿ ಬೋರಯ್ಯನಿಂದ ಮೈಸೂರು ಜಟ್ಟಿಗಳ ಮಾನವು ಉಳಿದ ವಿಷಯವು ಪ್ರಭುಗಳವರಿಗೂ ತಿಳಿಯಿತು ಮೈಸೂರು ಮಹಾರಾಜ ರೆಂದರೆ ದಾನವೀರರಾಗಿ ಕರ್ತವ್ಯಪರಾಯಣರಾದ ಧರ್ಮಪ್ರಭುಗಳು ಬೋರಯ್ಯನ ಸದ್ಗುಣಗಳು ಮಹಾಸನ್ನಿಧಾನಕ್ಕೆ ವಿದಿತವಾಗಿಯೇ ಇದ್ದುವು ಅವನಿಗೆ ವಿಜಯಪ್ರಾಪ್ತಿಯೂ ಆದುದನ್ನು ಕೇಳಿ ಅವರ ದಿವ್ಯಚಿತ್ತಕ್ಕೆ ಬಹಳ ಸಂತೋಷವಾಯಿತು ಅವರ ಪ್ರಜಾವಾತ್ಸಲ್ಯವನ್ನಂತು ಎಷ್ಟು ಕೊಂಡಾಡಿದರೂ ಸಾಲದು ಬೋರಯ್ಯನನ್ನು ಪ್ರಭುಗಳವರು ಕರೆಯಿಸಿ ಕೊಂಡು, "ಏನಯ್ಯಾ! ಅಂದು ನಮ್ಮ ಪ್ರಾಣವನ್ನು ಉಳಿಸಿದೆ ಇಂದು ಮೈಸೂರಿನ ಜಟ್ಟಿಗಳ ಮಾನವನ್ನುಳಿಸಿದೆ ನೀನು ಅಂಗಸಾಧನೆ ಮಾಡು ತ್ತಿದ್ದ ವಿಷಯವೇ ಒಬ್ಬರಿಗೂ ತಿಳಿದಿರಲಿಲ್ಲ ಸಂತೋಷ! ಸಂತೋಷ! ಇನ್ನೂ ಚೆನ್ನಾಗಿ ಸಾಧನೆಮಾಡಿ ಇನ್ನೂ ಪ್ರವರ್ಧಮಾನಕ್ಕೆ ಬಾ ಪ್ರಜೆಗಳ ಏಳಿಗೆಯೇ ನಮ್ಮ ಪರಮ ಸೌಭಾಗ್ಯ ಬಹಳ ಸಂತೋಷವಪ್ಪಾ! ಬಹಳ ಸಂತೋಷ!" ಎಂದು ಅಪ್ಪಣೆ ಕೊಡಿಸಿದರು ಆ ಬಳಿಕ ಅವನಿಗೆ ಬಹು ಮಾನವನ್ನೂ ರುಮಾಲು ಮುಂತಾದ ಉಡುಗೊರೆಗಳನ್ನೂ ಪ್ರಭುಗಳವರು ತಮ್ಮ ಅಮೃತ ಹಸ್ತದಿಂದ ದಯಪಾಲಿಸಿದರು ಬೋರಯ್ಯನು ಏನನ್ನೋ ಹೇಳಲು ಯತ್ನಿಸಿದನು. ಅವನಿಂದ ಅದು ಸಾಧ್ಯವೇ ಆಗಲಿಲ್ಲ, ಅವನಿಗೆ ದಿಕ್ಕೇ ತೋರದಂತಾಯಿತು ಅವನು, "ನನ್ನೊಡೆಯಾ! ನನ್ನೊಡೆಯಾ! ನನ್ನೊಡೆಯಾ!" ಎಂದು ಮೂರುಸಾರಿ ಹೇಳಿ, ಮುಂದೆ ಮಾತೇ ಹೊರಡದೆ ಗಳಗಳನೆ ಅತ್ತುಬಿಟ್ಟನು, ಪ್ರಭುಗಳವರ ಪದತಲದಲ್ಲಿ ಅಡ್ಡಬಿದ್ದನು

ಅವನು ಒಂದೇ ಪದವನ್ನು ಮಾತ್ರ ನೂರುಸಾರಿ ಹೇಳಿದರೂ, ಅದನ್ನು ಉಚ್ಚರಿಸಿದ ಬಗೆಯಲ್ಲಿ ಕೃತಜ್ಞತೆಯ ಮತ್ತು ರಾಜಭಕ್ತಿಯ ಒಂದುಕಡಲೇ ತುಂಬಿದ್ದಿತು ಮಹಾಸ್ವಾಮಿಯವರಿಗೆ ಅದರಿಂದ ಬಹಳ ಸಂತೋಷ ವಾಯಿತು "ಬಕ್ಷಿಯವರೇ! ಆ ದಿವಸವೂ ಅಷ್ಟೆ! ಈ ದಿವಸವೂ ಅಷ್ಟೆ! ಜೀವನವನ್ನು ಒಂದು ಹುಲ್ಲು ಕಡ್ಡಿಗಿಂತ ಕಡೆಯಾಗಿ ಭಾವಿಸಿ ಈತನು ಕೆಲಸಮಾಡಿಬಿಟ್ಟ" ಎಂಬುದಾಗಿ ಮುಗುಳುನಗೆಯಿಂದ ಅಪ್ಪಣೆಕೊಡಿಸಿ ಮಹಾಸ್ವಾಮಿಯವರ ಸವಾರಿಯು ಬಳಿಯಿತು; ಬೋರಯ್ಯನಿಗೆ ಹೆಚ್ಚು ಸಂಬಳವೂ ದೊರೆಯಿತು

ಬೋರಯ್ಯನು ಬಡಾಯಿ ಹೇಳಿಕೊಳ್ಳುವುದರಲ್ಲಿ ಮೊದಲೇ ಪ್ರಸಿದ್ಧ, ಅಂದಿನಿಂದಲಂತು ಅವನ ಬಡಾಯಿಗೆ ಕೊನೆಮೊದಲೇ ಇಲ್ಲದಂತಾಯಿತು. ಮಾತೆತ್ತಿದ್ದರೆ ಅವನು ತನ್ನ ತಲೆಯಮೇಲಿದ್ದ ಬಣ್ಣದ ರುಮಾಲನ್ನು ಸಾಕ್ಷಿ ಯಾಗಿ ಕೋರುವನು ಇನಾಮು ಉಡುಗೊರೆಗಳ ಮಾತಿಗಂತು ಮಿತಿಯೇ ಇಲ್ಲ ಹೆಚ್ಚೇಕೆ? ಅವನ ಬಡಾಯಿಯು, ಕೆರೆಯ ನೋಳಿಯ ಗಂಡಿ ಯಂತೆ, ದಿನದಿನವೂ ಬೆಳೆಯುತ್ತ ಹೋಯಿತು ನೀಲಮ್ಮನ ಬಳಿಯ ಲ್ಲಂತು ಅವನ ಬಡಾಯಿಗೆ ಮೇರೆಯೇ ಇರಲಿಲ್ಲ ಅರಮನೆಯಲ್ಲಿ ಸಂಗೀತ ಗಾರರಿಗೆ ಬಹುಮಾನವು ದೊರೆತರೆ ಅದು ತನ್ನ ಸಿಫಾರಿಸಿನ ಮೇಲೆ ದೊರೆ ತುದು, ಯಾರಾದರೂ ಒಳ್ಳೆಯ ಜವಾಹಿರಿಯನ್ನಿಟ್ಟುಕೊಂಡು ಹೊರಟರೆ, ಅದು ತಾನು ಅರಮನೆಯಿಂದ ಎರವಲಾಗಿ ಕೊಡಿಸಿದುದು, ಅರಮನೆಯಿಂದ ಯಾರಿಗಾದರೂ ಧರ್ಮಸಹಾಯವು ದೊರೆತರೆ, ಅದು ತನ್ನ ಸಲಹೆಯ ಮೇರೆಗೆ ನಡೆದುದು, ಯಾವುದಾದರೂ ದೇವಸ್ಥಾನಗಳಿಗೆ ತಸದೀಕು ಹೆಚ್ಚಾ ದರೆ, ಅದು ತನ್ನಿಂದ ದೊರೆತುದು—ಈ ರೀತಿಯಾಗಿ ಬೋರಯ್ಯನು ನೀಲಮ್ಮನೆದುರಿಗೆ ಬಡಿವಾರ ಹೇಳಿಕೊಳ್ಳಲು ಪ್ರಾರಂಭಿಸಿದನು ಅದನ್ನು ಕೇಳುವಾಗ ಅವಳಿಗೆ ಹತ್ತು ಕಿವಿಗಳಿದ್ದಂತೆ ಭಾವನೆ ಬೋರಯ್ಯನಿಗೆ ಅರಮನೆಯ ಉಡುಗೊರೆಯೂ ಬಹುಮಾನವೂ ಬಂದಮೇಲೆ ಅವನ ತಾಯಿಯು ಮೈಸೂರಿನಲ್ಲಿರುವುದು ಅಸಾಧ್ಯವಾಯಿತು, ಏಕೆಂದರೆ, ಊರಿಗೆ ಹೋಗಿ ತನ್ನ ಸರಿಯವರಲ್ಲಿಯೂ ಶಾನುಭೋಗರ ಮನೆಯಲ್ಲಿಯೂ ತನ್ನ

ಮಗನ ಪ್ರತಾಪವನ್ನು ಹೇಳಿಕೊಳ್ಳಬೇಕೆಂದು ಅವಳಿಗೆ ಅತ್ಯಾಸೆ ಇದನ್ನು ಕೇಳಿ ಬೋರಯ್ಯನ ಆನಂದವೇ ಆನಂದ ಕುಣಿಯುವ ಕಾಲಿಗೆ ಗೆಜ್ಜೆ ಕಟ್ಟಿದಮೇಲೆ ಕೇಳಬೇಕೆ? ಅಷ್ಟರಲ್ಲಿ ಅವಳು ಊರಿಗೆ ಹೋಗಲು ಅವಕಾಶವೂ ಸಿಕ್ಕಿತು ಬೋರಯ್ಯನನ್ನು ಅಪಹಾಸ್ಯ ಮಾಡಿದವರಲ್ಲಿ ಮುಖಂಡನಾದವನು ಫೌಜು ನೋಡಲು ಮೈಸೂರಿಗೆ ಬಂದನು ಅವನ ಹೆಸರು ಕುಂಟಲಿಂಗ ಅವನಂತು, ಬೋರಯ್ಯನ ವೈಭವವನ್ನೂ, ಅವನಿಗೆ ಬಂದಿದ್ದ ಉಡುಗೊರೆಗಳನ್ನೂ ನೋಡಿ ಬೆರಗಾಗಿಹೋದನು, ಬೂದುಗುಂಬಳಕಾಯಂತಿದ್ದ ಬೋರಯ್ಯನ ಮಾಟವಾದ ತಲೆಯನ್ನೂ ಅದರ ಮೇಲೆ ಕುಂಬಳಕಾಯಿಯ ತೊಟ್ಟಿನಂತಿದ್ದ ಜುಟ್ಟನ್ನೂ, ಎಷ್ಟು ಸಾರಿ ಹೇಗೆ ನೋಡಿದರೂ ಅವನಿಗೆ ತೃಪ್ತಿಯಿಲ್ಲ ತಮ್ಮ ಊರಿನವನು ಅಷ್ಟು ಪ್ರಸಿದ್ಧನಾದನೆಂಬುದೇ ಅವನಿಗೊಂದು ಸಂತೋಷ ಅವನು "ಬೋರಣ್ಣಾ! ದೊಡ್ಡ ಒಕ್ಕಲಾದೆ ಸಂತೋಶ! ತಿಳೀದೆ ನಾನು ಬೊಗಳಿದೆ, ಆ ಮಾತು ಮರೆತುಬಿಡಣ್ಣಾ! ನಮ್ಮೂರು ದೂರಾಮಾಡಬ್ಯಾಡ ನಾನೇನೋ ನಿನ್ನ ಕಿರೀರ್ತಿ ಜಯಭೇರಿ ಊರಿನಾಗೆಲ್ಲಾ ಹೊಡೀತೀನಿ, ಎಲ್ಲರಿಗೂ ತಿಳಿಸ್ತೀನಿ, ನೀನೂ ಬಂದರೆ ಚೆಂದ" ಎಂದನು ಬೋರಯ್ಯನ ಬಡಾಯಿಗೆ ಹೊಸ ಹುರುಪು ಬಂದಂತಾಯಿತು ಅವನು ವರಸೆ ವರಸೆಯಾಗಿ ಏನೇನನ್ನೋ ಹೇಳಿದನು ತಾನು ಅರಮನೆಯಲ್ಲಿಲ್ಲದೆ ಹೋದರೆ ಒಂದು ಗಳಿಗೆಯೂ ಅಲ್ಲಿಯ ಕೆಲಸವು ಸರಿಯಾಗಿ ನಡೆಯದೆಂಬುದು ಅದರ ಮುಖ್ಯ ಸಾರಾಂಶ ಕೊನೆಗೆ, ಬೋರಯ್ಯನು ಅವನ ಜೊತೆಯಲ್ಲಿ ತಮ್ಮ ತಾಯಿಯನ್ನು ಕಳುಹಿಸಿಕೊಟ್ಟನು ಊರಿನಿಂದ ದವಸವನ್ನು ತರಬೇಕಾಗಿದ್ದಿತು, ಎರಡೊಂದು ಕೆಲಸವೆಂದು ಭಾವಿಸಿ ಮುದುಕಿಯು ಸಂತೋಷದಿಂದ ಹೊರಟಳು ಅವಳು ಮಾಡಬೇಕೆಂದಿದ್ದ ಕೆಲಸವು ಕುಂಟಲಿಂಗನಿಂದಲೇ ಬಹಳ ಸಮರ್ಪಕವಾಗಿ ನಡೆಯಿತು ಅದೇ ಚೆನ್ನವೆಂದು ಹೇಳಿ ಅವಳು ಸುಮ್ಮನಾದಳು

ಒಂದು ದಿನ ಅರಮನೆಯ ಉತ್ತಮವಾದ ಸೀರೆ ದೋತರಗಳು, ಶಾಲು ಸಕಲಾತಿಗಳು, ಉಡಿಗೆ ತೊಡಿಗೆಗಳು ಮುಂತಾದುವುಗಳಿರುವ ಮಹಲಿ

ನಲ್ಲಿ ಕಪ್ಪುಬಣ್ಣದ ಹೆಂಗುಸೊಬ್ಬಳು ತನ್ನ ಅಂದವನ್ನು ಕನ್ನಡಿಯಲ್ಲಿ ನೋಡಿ ನೋಡಿ ಹಿಗ್ಗುತ್ತಿದ್ದಳು ಅವಳನ್ನು ನೋಡಿದರೆ, ಆರವದ ನಾಟಕಗಳಲ್ಲಿ ಬೊಜ್ಜುಮೈಯುಳ್ಳವರು ಧರಿಸಿದ ಹೆಣ್ಣುವೇಷದಂತೆ ಕಾಣುತ್ತಿದ್ದಿತು ಅವಳ ಮುಖವು ಚಿಂತೆಯಿಂದ ಕೂಡಿದ್ದಂತೆ ತೋರುತ್ತಿದ್ದಿತು, ಅವಳ ಮನಸ್ಸಿನಲ್ಲಿ ಏನೋ ಒಂದು ವಿಧದ ಕಳವಳ ಕೊನೆಗೆ ಅವಳು ನಿಟ್ಟುಸಿರನ್ನು ಬಿಟ್ಟು ಪುರುಷ ವೇಷವನ್ನು ಧರಿಸಿದಳು ಸ್ವಲ್ಪ ಹೊತ್ತಾದಮೇಲೆ ಆ ಮಹಲಿನ ಅಧಿಕಾರವರ್ಗದವರೆಲ್ಲರೂ ಮತ್ತೆ ಅಲ್ಲಿಗೆ ಬಂದವರು ಯಥಾಕಾಲದಲ್ಲಿ ಮನೆಗೆ ಹೊರಟರು ವೇಷದ ಸ್ತ್ರೀಯೂ ಮಹಲಿನಿಂದ ಹೊರಟಳು ಆದರೆ ಏನೋ ಭಯಪಟ್ಟವಳಂತೆ ಅತ್ತಿತ್ತ ನೋಡುತ್ತ ಅವಳು ಹೆಜ್ಜೆಯಿಡುತ್ತಿದ್ದುದನ್ನು ನೋಡಿ, ಪಹರೆಯವನಿಗೆ ಸಂಶಯವಾಯಿತು ಅವನು ಅವಳ ಮೈಯನ್ನೇ ಎವೆಯಿಕ್ಕದೆ ನೋಡುತ್ತಿದ್ದು, "ಬೋರಯ್ಯಾ! ಒಳ್ಳೆಯ ವಿದ್ಯವನ್ನೇ ಕಲ್ತೆ; ನಿಲ್ಲು!" ಎಂದುಬಿಟ್ಟನು ಆ ವೇಷದ ಸ್ತ್ರೀಯು ಬಡಾಯಿ ಬೋರಯ್ಯನೇ ಅವನು ಉಟ್ಟಿದ್ದ ಹಸುರು ಸೀರೆಯ ಸೆರಗು ಕೊರಳಿನ ಹಿಂಭಾಗದಲ್ಲಿ ಹಾಯ್ದು ಅಂಗಿಯ ಕತ್ತುಪಟ್ಟಿಯ ಮೇಲಕ್ಕೆ ಕಾಣುತ್ತಿದ್ದಿತು ಇನ್ನು ಹೇಳಬೇಕಾದುದೇನು? ಬೋರಯ್ಯನು ಸೀರೆಯ ಕಳ್ಳ ಅವನ ಕಳ್ಳತನವು ಸಂಶಯಕ್ಕೆಡೆಯಿಲ್ಲದಂತೆ ಬಯಲಿಗೆ ಬಿದ್ದು, ಅವನನ್ನು ಪಹರೆಯಲ್ಲಿಟ್ಟರು ಮರುದಿವಸ ಬಕ್ಷಿಯವರಲ್ಲಿ ಅವನ ವಿಚಾರಣೆಯಾಗಬೇಕಾಗಿದ್ದಿತು ಅಂದು ರಾತ್ರಿ ನೀಲಮ್ಮನು ತನ್ನ ಗಂಡ ಏಕೆ ಮನೆಗೆ ಬರಲಿಲ್ಲವೆಂದು ತಳಮಳಗೊಳ್ಳುತ್ತಿದ್ದಳು ಅವರು ಒಕ್ಕಲಿದ್ದುದು ದೊಡ್ಡದೊಂದು ಮನೆಯಲ್ಲಿ ಆ ಮನೆಯಲ್ಲಿ ಮೂರು ನಾಲ್ಕು ಸಂಸಾರಗಳು ಆ ಸಂಸಾರಗಳವರು ನೀಲಮ್ಮನಿಗೆ ಧೈರ್ಯ ಹೇಳಿ ಹೇಳಿ ಸಾಕಾದರು ಆದರೂ ಅವಳು ಮುಗಿಲೇ ತನ್ನ ಮೇಲೆ ಕಳಚಿಬಿದ್ದಷ್ಟು ಭೀತಿಗೊಂಡಿದ್ದಳು

ಬಕ್ಷಿಯವರಿಗೂ ಬೋರಯ್ಯನಮೇಲೆ ಬಹಳ ಮಮತೆ ಬೋರಯ್ಯನು ಶ್ರದ್ಧಾ ಭಕ್ತಿಗಳಿಂದ ಕೆಲಸಮಾಡುತ್ತಿದ್ದುದೇ ಅದಕ್ಕೆ ಕಾರಣ. ನೀರಿನಲ್ಲಿ ಬಿದ್ದು ಮುಳುಗಿಹೋಗುತ್ತಿದ್ದ ಅವರ ಹುಡುಗನೊಬ್ಬನನ್ನು

ಬೋರಯ್ಯನು ಬದುಕಿಸಿದ ಮೇಲಂತು, ಬಕ್ಷಿಯವರಿಗೆ ಅವನಲ್ಲಿ ಬಹಳ ವಿಶ್ವಾಸ ಬೋರಯ್ಯನು ಒಂದು ದಿನವೂ ಸುಳ್ಳು ಹೇಳಿದವನಲ್ಲ, ಮೋಸ ವಂತು ಅವನ ಬಳಿಗೇ ಸುಳಿಯದು ಇಂತಹ ಮನುಷ್ಯನು ಅಕಾರ್ಯ ಮಾಡಿದುದನ್ನು ಕಂಡು ಅವರಿಗೆ ಬಹಳ ಅನುತಾಪವುಂಟಾಯಿತು ಅವರು ಅವನನ್ನು ವಿಚಾರಣೆಮಾಡಿದರು. ತಾನು ಮಾಡಿದುದು ತಪ್ಪು ಕೆಲಸ ವೆಂದು ಬೋರಯ್ಯನು ತಾನಾಗಿಯೇ ಒಪ್ಪಿಕೊಂಡು, ಹೇಗಾದರೂ ಮಾಡಿ ತನ್ನನ್ನು ಉದ್ಧಾರಮಾಡಬೇಕೆಂದು ಬೇಡಿಕೊಳ್ಳುತ್ತ ಹಲವು ಸಾರಿ ಬಕ್ಷಿ ಯವರಿಗೆ ಅಡ್ಡಬಿದ್ದನು ಅವರಿಗೂ ಮನಸ್ಸು ಕರಗಿತು ಆದರೂ ಅಪ ರಾಧಿಗೆ ಶಿಕ್ಷೆಯಾಗಲೇಬೇಕಾದ ಕಾರಣ, ಮಹಾಪ್ರಭುಗಳವರು ಅಪ್ಪಣೆ ಮಾಡಿದ ಶಿಕ್ಷೆಯನ್ನು ವಿಧಿಸಿಬಿಡಬೇಕೆಂದು ಗೊತ್ತುಮಾಡಿಕೊಂಡು ಬೋರ ಯ್ಯನ ಅಪರಾಧವನ್ನು ಬಕ್ಷಿಯವರು ಸನ್ನಿಧಾನಕ್ಕೆ ಅರಿಕೆಮಾಡಿದರು. ಬೋರಯ್ಯನಂತಹವನು ಇಂತಹ ನೀಚಕಾರ್ಯಮಾಡಿದುದನ್ನು ಕಂಡು ಮಹಾಸ್ವಾಮಿಯವರಿಗೂ ಆಶ್ಚರ್ಯವಾಯಿತು ಅಪರಾಧಿಯ ವಿಚಾರಣೆ ಯನ್ನು ವಿಶದವಾಗಿ ನಡೆಯಿಸಿ ತಮ್ಮಲ್ಲಿಗೆ ವರದಿಮಾಡಬೇಕೆಂದು ಬಕ್ಷಿ ಗಳಿಗೆ ಪ್ರಭುಗಳವರ ಅಪ್ಪಣೆಯಾಯಿತು ಬಕ್ಷಿಯವರು ನಡೆಯಿಸಿದ ವಿಚಾರಣೆಯಲ್ಲಿ ಹೊರಬಿದ್ದ ಅಂಶಗಳನ್ನು ವಾಚಕರಿಗೆ ಅರಿಕೆಮಾಡುತ್ತೇನೆ

ಕಳವು ನಡೆದ ಹಿಂದಿನ ದಿನ ರಾತ್ರಿ ಒಂದು ಮದುವೆಯ ಮೆರೆವಣಿ ಗೆಯು ಬಹಳ ವಿಜೃಂಭಣೆಯಿಂದ ನಡೆಯಿತು: ದೊಡ್ಡ ವರ್ತಕರ ಮನೆಯ ಮದುವೆ, ವಧೂವರರ ಮೆರೆವಣಿಗೆ, ದೊಡ್ಡದೊಡ್ಡ ದೀವಿಗೆಗಳು; ದಿವ್ಯ ವಾದ ತಾಳಮೇಳಗಳು; ಚಿನ್ನ ಬೆಳ್ಳಿಯ ಜೋಡಿ ಜೋಡಿ ಓಲಗಗಳು, ಬಹಳ ವೈಭವದ ಮೆರೆವಣಿಗೆ. ಬೋರಯ್ಯನೂ, ನೀಲಮ್ಮನೂ ಅದನ್ನು ಕಣ್ಣುತುಂಬ ನೋಡಿದರು ಬೋರಯ್ಯನ ಕಣ್ಣು ಚಿನ್ನದ ಓಲಗದ ಮೇಲೆ ಅವನು ವಧೂವರರನ್ನೂ ನೋಡದೆ ಓಲಗದವರನ್ನೇ ದಿಟ್ಟಿಸಿ ನೋಡುತ್ತಿದ್ದನು. ನೀಲಮ್ಮನ ಕಣ್ಣುಗಳಿಗಂತು ಮದುವಣಗಿತಿಯುಟ್ಟಿದ್ದ ಜರತಾರಿಯ ಹೂವಿನ ತಿಳಿಹಸುರು ಬಣ್ಣದ ರೇಷ್ಮೆಯ ಸೀರೆಯನ್ನು ಬಿಟ್ಟು ಹಿಂದಿರುಗುವ ಇಷ್ಟವೇ ಇರಲಿಲ್ಲ "ಶಾನುಭೋಗರ ಮನೆಯ ಸೀರೆಯ

ಅಪ್ಪನಂಥಾ" ಸೀರೆಯ ಮಾತು ಹಾಗಿರಲಿ, ಅದರ ತಮ್ಮನಂಥ ಸೀರೆಯೂ ಬಂದಿರಲಿಲ್ಲ; ಸದ್ಯದಲ್ಲಿ ಬರುವಹಾಗೂ ಇರಲಿಲ್ಲ ಬೋರಯ್ಯನು ತನ್ನ ಹೆಂಡತಿಯೊಡನೆ ಮನೆಯೊಳಕ್ಕೆ ಹೋಗಿ, ಪ್ರೀತಿಯಿಂದ ಅವಳ ಬೆನ್ನಿನ ಮೇಲೆ ಕೈಹಾಕಿ, "ನೀಲೀ! ನೀಲೀ! ನೋಡ್ದೋ ಆ ಚಿನ್ನದ ವಾಲಗದ ಜೋಕು ಹೆಂಗಿತ್ತು!" ಎಂದನು. ಅವಳು "ಹಾಳು ವಾಲಗದ ಪೀಪೀ ಶಬ್ದ ಯಾರಿಗೆ ಬೇಕು? ಮದುವೆಯ ಹೆಣ್ಣು ಉಟ್ಟಿದ್ದ ಹಸುರು ಸೀರೆ! ಅದೀಗ ಬಲು ಜೋಕು!" ಎಂದು ಉತ್ತರ ಹೇಳಿದಳು ಬೋರಯ್ಯನು ಸುಮ್ಮನಿರಬಾರದೆ? "ಆ ಸೀರೆಯ ಕತೆಯೇ ಕತೆ, ಸೋಜಿಗದ ಕತೆ" ಎಂದು ಹೇಳಿ ಗಟ್ಟಿಯಾಗಿ ನಕ್ಕನು. ಅಷ್ಟಕ್ಕೇ ಅವನ ಬಡಾಯಿ ನಾಲಗೆಯು ಸುಮ್ಮನಿರಲಿಲ್ಲ; ಮದುವೆಯ ಕಾಲದ ಉಪಯೋಗಕ್ಕಾಗಿ ಒಬ್ಬ ದೊಡ್ಡ ಮನುಷ್ಯರ ಮನೆಯಿಂದ ತಾನೇ ಎರವಾಗಿ ಆ ಸೀರೆಯನ್ನು ತಂದು ಕೊಟ್ಟಿದ್ದುದಾಗಿ ತಿಳಿಸಿದನು ಅಲ್ಲಿಗೂ ಅವನ ಚಾಪಲ್ಯ ತೀರಲಿಲ್ಲ: "ಅರಮನೆಯಿಂದಾಲೇ ಕೊಡಿಸಿಕೊಡಬೇಕೂ ಅಂತಿದ್ದೆ ಆದರೆ ಅಲ್ಲಿರೋವು ಬಹಳ ಭಾರಿ ಭಾರಿ ಸೀರೆ ಈ ಸಣ್ಣ ಸೆಟ್ಟರ ಮನೆಗೆ ಅವು ತಡೆಯಾಕಿಲ್ಲ ತೀರಾ ಭಾರಿ ಅಂತ ಹಿಂತೆಗ್ದೆ ಇಂಥ ಸೀರೆ ಅಲ್ಲಿ ಹುಡುಕಿದ್ರೂ ಇಲ್ಲ ಅಲ್ಲಿರೋವೆಲ್ಲಾ ದೇವಲೋಕದೋರು ಉಡೋ ಸೀರೆಗಳು" ಎಂದೂ ಅವನು ನೀಲಮ್ಮನಿಗೆ ಹೇಳಿದನು. ಒಂದು ದಿನದ ಮಟ್ಟಿಗಾದರೂ ಅರಮನೆಯಿಂದ ಒಂದು ಹಸುರು ಬಣ್ಣದ ಭಾರಿ ಸೀರೆಯನ್ನು ತನಗೆ ತಂದುಕೊಡಬೇಕೆಂದು ನೀಲಮ್ಮನು ಕೇಳಿಕೊಂಡಳು ಬೋರಯ್ಯನ ಬಡಾಯಿ ಮಾತನ್ನು ನಂಬಿ ಅರಮನೆಯಲ್ಲಿ ಅವನಿಗೆ ಅತ್ಯಂತ ಪ್ರಾಬಲ್ಯ ವುಂಟೆಂದು ಭಾವಿಸಿ ಅವಳು ಹಠಹಿಡಿದಳು ಸುಮ್ಮನೆ ಇದ್ದ ಹುಡುಗನೆದುರಿಗೆ ಅವನ ತಂದೆಯು ತನ್ನ ಜೇಬನ್ನು ಬಡಿದು ತೋರಿಸಿ, "ಇಗೋ, ಇಗೋ! ನನ್ನ ಜೇಬಿನಲ್ಲಿ ಹಾಲುಬಾಯಿ ತುಂಬಿದೆ" ಎಂದಂತಾಯಿತು ಬೋರಯ್ಯನ ಸ್ಥಿತಿ. ಹುಡುಗನಿಗೆ ಹಾಲುಬಾಯಿ ಸಿಕ್ಕಬೇಕು, ಇಲ್ಲವೇ ಜೇಬಿನ ಶೋಧನೆಯು ಮುಗಿದು ತಂದೆಯ ಮಾತು ಸಟೆಯೆಂದು ನಿರ್ಧಾರವಾಗಿ ಅವನಿಗೆ ಅವಮಾನವಾಗಬೇಕು. ಅಲ್ಲಿಯವರೆಗೂ ಹುಡುಗನು ಹಠ

ವನ್ನು ಬಿಡುವಹಾಗಿಲ್ಲ ಬೋರಯ್ಯನ ಅವಸ್ಥೆಯೂ ಹೀಗೆಯೇ ಆಯಿತು. ಸೀರೆಯನ್ನು ತಂದುಕೊಡದೆ ಇದ್ದರೆ, ನೀಲಮ್ಮನು ಪಾತಾಳ ಗರಡಿಯನ್ನು ಬಿಟ್ಟು ಬೋರಯ್ಯನ ಮಾತುಗಳು ಬರಿಯ ಬಡಾಯಿಯೆಂಬುದನ್ನು ಹೊರಕ್ಕೆ ತಂದುಬಿಡಲು ಸಿದ್ಧವಾದಳು ಮಾನ ಹೋಗುವ ಘಟ್ಟವೇ ಬಂದೊದಗಿತು ಪ್ರಾಣಕ್ಕಿಂತಲೂ ಮಾನವೇ ಹೆಚ್ಚೆಂಬುದು ತಿಳಿದೇ ಇದೆ ಆದಕಾರಣ, ಒಂದು ದಿನದ ಮಟ್ಟಿಗೆ ಒಂದು ಹಸುರು ಬಣ್ಣದ ಸೀರೆಯನ್ನು ಕದ್ದು ತಂದು ಮಾನವನ್ನುಳಿಸಿಕೊಳ್ಳುವ ಯೋಚನೆಯನ್ನು ಬೋರಯ್ಯನು ಮಾಡಲೇಬೇಕಾಯಿತು ಆದರೆ, ಈರೀತಿ ಮಾಡಲು ಅವನಿಗೆ ಮನಸ್ಸು ಒಪ್ಪದಿದ್ದರೂ ಒಂದು ಸೀರೆಯನ್ನು ಅವನು ಹೇಗಾದರೂ ಸಂಪಾದಿಸಿ, ಅದನ್ನು ಕದ್ದು ತೆಗೆದುಕೊಂಡು ಹೋಗಲು ಅನುವಾದನು, ಮಾರನೆಯ ದಿವಸವೇ ಅದನ್ನು ಅದರ ಸ್ಥಳಕ್ಕೆ ಸೇರಿಸಬೇಕೆಂಬುದು ಅವನ ಉದ್ದೇಶ.

ಬಕ್ಷಿಯವರು ಈ ಕಥೆಯನ್ನು ಮಹಾಸ್ವಾಮಿಯವರಿಗೆ ಅರಿಕೆಮಾಡಿದರು ಬೋರಯ್ಯನನ್ನು ಯಥಾಪ್ರಕಾರ ಪಹರೆಯಲ್ಲಿಡುವಂತೆ ಅಪ್ಪಣೆಯಾಯಿತು ಆ ಬಳಿಕ ಆರೋಗಣೆಯನ್ನು ಒಪ್ಪಿಸಿಕೊಳ್ಳಲು ಮಹಾಸ್ವಾಮಿಯವರು ಚಿತ್ತೈಸಿದರು

ಮಧ್ಯಾಹ್ನವು ಕಳೆದು ಬಿಸಿಲು ತಂಪುವ ಹೊತ್ತಿಗೆ ಬೋರಯ್ಯನನ್ನು ಮಹಾಸ್ವಾಮಿಯವರೆದುರಿಗೆ ಕರೆದುಕೊಂಡು ಬರಲು ಅಪ್ಪಣೆಯಾಯಿತು. ಅಲ್ಲದೆ, ಮಹಾಸನ್ನಿಧಾನದ ಬಳಿಯಲ್ಲಿ ಬೋರಯ್ಯನೂ ಬಕ್ಷಿಯವರೂ ಇವರಿಬ್ಬರ ಹೊರತು ಮತ್ತಾರೂ ಇರಕೂಡದೆಂದೂ ಅಪ್ಪಣೆಯಾಯಿತು. ಪ್ರಭುಗಳವರು ಬೋರಯ್ಯನನ್ನು ಕುರಿತು, "ಏನಯ್ಯಾ! ಯೋಗ್ಯನೆಂದು ತಿಳಿದು ನಾವು ನಿನ್ನಲ್ಲಿ ನಂಬಿಕೆಯಿಟ್ಟುದಕ್ಕೆ ಒಳ್ಳೆಯ ಕೆಲಸವನ್ನೇ ಮಾಡಿದೆ; ಅರಮನೆಯಲ್ಲೇ ಕಳ್ಳತನವನ್ನು ಪ್ರಾರಂಭಿಸಿದೆ!" ಎಂದು ಅಪ್ಪಣೆ ಕೊಡಿಸಿದರು. ಬೋರಯ್ಯನ ಒಡಲೆಲ್ಲ ಗಡಗಡನೆ ನಡುಗಲಾರಂಭಿಸಿತು ಅವನು ಗದ್ಗದಸ್ವರದಿಂದ, "ಮಹಾಸ್ವಾಮಿ! ನಾನು ಮಣ್ಣುತಿಂದೆ; ಆದ್ರೂ ಕದಿಯಬೇಕೂ ಅಂತ ಮಾಡಲಿಲ್ಲ ನನ್ನ ತಪ್ಪು

ಎಷ್ಟಿದ್ದರೂ ಮಾಫ್ ಮಾಡಿ, ನೀಲಿ ತಮ್ಮ ಮಗಳೂ ಅಂತ ಭಾವಿಸ್ಕೊಂಡು ಹೊಟ್ಟೇಲಿಟ್ಟು ಕಾಪಾಡಿಕೊಡಿ ನನ್ನೊಡೆಯಾ! ನಾ-ನೇ-ನೋ-ಮ-ಣ್ಣ-ತಿಂ-ದೆ ಇ-ದೆ-ಲ್ಲಾ-ನಂಜಪ್ಪನ್ನ-ನೋಡದೆ ಅಲಕ್ಷ್ಯ ಮಾಡಿದ ದೋಷ" ಎಂದನು ಅವನು ಬಗ್ಗಿಸಿದ ತಲೆಯನ್ನು ಮೇಲಕ್ಕೆತ್ತಲಿಲ್ಲ ಮಹಾ ರಾಜರು, "ನಂಜಪ್ಪನೆಂಬುವನು ಯಾರೊ?" ಎಂದು ಕೇಳಿದರು. ಬೋರಯ್ಯನು ಯಂತ್ರದ ಬೊಂಬೆಯಂತೆ ಎವೆಯಿಕ್ಕದೆ ನೆಲವನ್ನೇ ನೋಡುತ್ತ, "ನಂಜಪ್ಪ, ಮಹಾಸ್ವಾಮಿ! ನಂಜನಗೂಡಿನಲ್ಲಿರೋ ನಮ್ಮಪ್ಪ ನಂಜಪ್ಪ! ಧಣಿಯೋರ ಸೇವೇ ಸಂಪಾದಿಸಿಕೊಟ್ಟ ನನ್ನ ನಂಜಪ್ಪ!" ಎಂದು ಉತ್ತರ ಹೇಳಿದನು ಬಳಿಕ ಮಹಾಸ್ವಾಮಿಯವರು ಬಕ್ಷಿಯವರನ್ನು ಕುರಿತು, "ಇವನೊಡನೆ ನಮಗೇಕೆ ಚರ್ಚೆ? ಈಗ ಇವನನ್ನು ಪಹರೆಯಿಂದ ಬಿಡಿಸಿ ಮನೆಗೆ ಕಳುಹಿಸಿಬಿಡಿ, ನಾಳೆಯದಿನ ಶಿಕ್ಷೆಯ ವಿಚಾರ ಮಾಡೋಣ" ಎಂದು ಆಜ್ಞಾಪಿಸಿದರು

ಬೋರಯ್ಯನು ಅವಮಾನದಿಂದ ಸಂಕಟಪಡುತ್ತ ಮನೆಗೆ ಹೋದನು ಅವನ ತಾಯಿಯು ಊರಿನಲ್ಲಿರಲಿಲ್ಲವೆಂಬುದನ್ನು ಮತ್ತೆ ಅರಿಕೆ ಮಾಡಬೇಕಾಗಿಲ್ಲ ನೀಲಮ್ಮನು ಅಳುತ್ತ ಮಲಗಿರುವಳೆಂದು ಅವನು ಭಾವಿಸಿದ್ದನು ಅವಳು ಎಂದಿನಂತೆ ರಾತ್ರಿಯ ಊಟಕ್ಕೆ ಅಡಿಗೆಮಾಡುತ್ತ ಕುಳಿತಿದ್ದುದನ್ನು ಕಂಡು ಅವನಿಗೆ ರೇಗಿಹೋಯಿತು ಅವನ ಮನಸ್ಸಿನಲ್ಲಿ ಮೊದಲೇ ದುಃಖ, ತಾನು ಹಿಂದಿನ ದಿನದಿಂದಲೂ ಮನೆಗೆಬಾರದೆ ಹೋಗಿದ್ದರೂ ನೀಲಮ್ಮನು ಅಳದೆ ಅಡಿಗೆ ಮಾಡುತ್ತಿರುವುದೆಂದರೆ ಅವನ ಮನಸ್ಸಿಗೆ ಅದು ಕ್ಷಮಿಸಲು ಸಾಧ್ಯವಿಲ್ಲದ ಅಪರಾಧವೆಂದೇ ನಿರ್ಧರವಾಯಿತು. ಅಳುವಿನ ಮಾತು ಹಾಗಿರಲಿ, ಅವಳು ಮುಗುಳ್ನಗೆಯನ್ನು ಸೂಸುತ್ತ, ಗಂಡನನ್ನು ನೋಡಿ "ನಿನ್ನೆಯಿಂದ ಬರಲೇ ಇಲ್ಲ" ಎಂದಳು ಬೋರಯ್ಯನು ಹುಬ್ಬು ಗಂಟಿಕ್ಕಿ, "ನಾನು ಬಂದರೇನು? ಬೆಂದುಹೋದರೇನು? ನಿಂಗೇನು? ಆವತ್ತು ದಾಸರು ಹೇಳಿದ್ದು ಸರಿ: ಯಾರಿಗೆ ಯಾರೋ ಪುರಂಧರ ವಿಠಲಾ ಅಂತ" ಎಂದು ಗದರಿಸಿದನು ನೀಲಮ್ಮನ ಕಣ್ಣುಗಳಿಂದ ನೀರು ಹರಿಯಿತು. ಅವನು ಗಟ್ಟಿಯಾಗಿ ನಿಟ್ಟುಸಿರು ಬಿಟ್ಟು ನಡು

ಮನೆಗೆ ಹೋಗಿ ಮಲಗಿದನು ಕಿರುಮನೆಯಲ್ಲಿ ಹಾಸಿಗೆಯು ಸಿದ್ಧವಾಗಿದ್ದೂ ಅಲ್ಲಿಗೆ ಹೋಗಲು ಅವನ ಮನಸ್ಸಿಗೆ ಬೇಡವಾಯಿತು ನೀಲಮ್ಮನು ಗುಣವಂತೆ, ಕ್ಷಮೆಯ ಮೂರ್ತಿ; ಅವಳು ಆದರದಿಂದ ಗಂಡನ ತಲೆಯ ಮೇಲೆ ಕೈಯಿಟ್ಟು, ಅವನ ಅಂದಿನ ನಡತೆಗೆ ಕಾರಣವನ್ನು ಕೇಳಿದಳು ಬೋರಯ್ಯನ ದರ್ಪವು ಆಗಿನ ಸ್ಥಿತಿಯಲ್ಲಿಯೂ ಸ್ವಲ್ಪ ನಡಿಲಿಹೋಗಿ, "ಮೂರು ಕಾಸಿನ ಹೆಂಗಸು ನಿನಗೇಕೆ ದೊಡ್ಡ ಸಂಗತೀ ಪಾರಪತ್ಯ?" ಎಂಬ ಉತ್ತರ ಹೊರಟಿತು ನೀಲಮ್ಮನು ಮತ್ತೆ ಉಸಿರೆತ್ತದೆ ಸುಮ್ಮನೆ ಹೊರಟುಹೋದಳು ಅದರಿಂದ ಬೋರಯ್ಯನ ಮನಸ್ಸಿನಮೇಲೆ ಪರಿಣಾಮವಾಗದೆ ಹೋಗಲಿಲ್ಲ ತಾನು ಒರಟುತನವನ್ನು ತೋರಿಸಿದುದಕ್ಕಾಗಿ ಅವನಿಗೆ ಪಶ್ಚಾತ್ತಾಪವಾಯಿತು ಆದರೂ ತಪ್ಪನ್ನು ಒಪ್ಪಿಕೊಳ್ಳಲು ಬಿಂಕದ ಬಾಧೆ ಮರುದಿನದ ಶಿಕ್ಷೆಯ ಭಯ, ಅದಕ್ಕಿಂತ ಹೆಚ್ಚಾಗಿ ಅವಮಾನದ ಆತಂಕ ಆದುದರಿಂದ ಅವನು ನೀರವವಾದನು

ಅಡಿಗೆಯಾಯಿತು, ನೀಲಮ್ಮನು ಗಂಡನನ್ನು ಊಟಕ್ಕೆಬ್ಬಿಸಿದಳು ಅವನು ಸದ್ದುಮಾಡದೆ ಮೂಗನಂತೆ ಎದ್ದುಬಂದು ಊಟಮಾಡಿದನು ಆ ಬಳಿಕ ಅವನು "ನೀಲೀ! ನನ್ನ ಮನಸು ಇವತ್ತು ಏನೋ ಆಗ್ತೈತೆ" ಎಂದನು ನೀಲಮ್ಮನು ಅದಕ್ಕೆ ಕಾರಣವನ್ನು ಕೇಳಿ ಎಷ್ಟೋ ಪ್ರೀತಿಯಿಂದ ಮಾತನಾಡಿದಳು ಬೋರಯ್ಯನು, "ನೋಡ್ಪೊ! ನೋಡ್ಪೊ! ಆಗಲೇ ತಲೆಹರಟೆ" ಎಂದು ಹೇಳುತ್ತ ಕಿರುಮನೆಗೆ ಹೋಗಿ ಮಲಗಿಬಿಟ್ಟನು ಅವನು 'ಸಂಜಪ್ಪ' ನನ್ನು ನೆನೆದು, ತನಗೆ ಬಂದಿದ್ದ ವಿಪತ್ತಿನಿಂದ ಚಾಮುಂಡೇಶ್ವರಿಯೇ ತನ್ನನ್ನು ಉದ್ಧಾರಮಾಡಬೇಕೆಂದು ಬಗೆಬಗೆಯಾಗಿ ಪ್ರಾರ್ಥಿಸಿಕೊಂಡನು, ನೀಲಿಯನ್ನು ಗದರಿಸಿಕೊಂಡುದಕ್ಕಾಗಿ ಬಹಳ ವ್ಯಥೆಪಟ್ಟನು ಸ್ವಲ್ಪ ಹೊತ್ತಿನ ಮೇಲೆ ಅವನಿಗೆ ನಿದ್ದೆ ಹತ್ತಿತು

ಬೋರಯ್ಯನು ನಿದ್ದೆಮಾಡುತ್ತಿರುವಾಗ ಅವನ ಮುಖದಮೇಲೆ ಏನೋ ತಣ್ಣಗೆ ಬಿದ್ದಂತಾಗಿ ಅವನು ತಟಕ್ಕನೆ ಎಚ್ಚತ್ತನು, ನಿದ್ದೆಯ ಜೋಂಪು ಇನ್ನೂ ಸ್ವಲ್ಪವೂ ಹರಿದಿರಲಿಲ್ಲ ಅವನು ಮಲಗಿದಾಗ ಕತ್ತಲೆ

ಯಾಗಿದ್ದ ಕಿರುಮನೆಯು ಆಗ ಪ್ರಕಾಶಮಾನವಾದ ಬೆಳಕಿನಿಂದ ಬೆಳಗು ತ್ತಿದ್ದಿತು ಹಾಸಿಗೆಯ ಬಳಿಯಲ್ಲಿ ನವಯುವತಿಯೊಬ್ಬಳು ನಿಂತಿದ್ದಳು ಅವಳನ್ನು ನೋಡುತ್ತಲೆ ಬೋರಯ್ಯನಿಗೆ ಆ ಸ್ತ್ರೀರೂಪವು ಚಾಮುಂಡೇಶ್ವರಿಯೆಂಬ ಭಾವನೆ ಹುಟ್ಟಿತು ಚಿನ್ನದ ಹೂವಿನ ನೀರಾಜಿಯ ಸೀರೆಯು ಬೆಳಕಿನಲ್ಲಿ ಚಕಚಕಿಸುತ್ತಿದೆ, ಕೈಬೆರಳಿನಲ್ಲಿ ವಜ್ರದ ಉಂಗುರವು ಥಳಥಳಿಸುತ್ತಿದೆ, ದೇವಿಯು ಸೌಮ್ಯರೂಪದಿಂದ ನಿಂತಿದ್ದಾಳೆ, ಅವಳು ಉಟ್ಟಿರುವ ಸೀರೆಯ ಜರತಾರಿಯ ಅಂಚು ನೆಲದಮೇಲೆ ಹರಿದಾಡುತ್ತಿದೆ ಬೋರಯ್ಯನು ಹುಚ್ಚನಂತೆ ಕೈನೀಡಿ ದೇವಿಯ ಪಾದಗಳನ್ನು ಹಿಡಿಯಹೋದನು ಅವಳು ಸರಕ್ಕನೆ ಒಂದೆರಡು ಹೆಜ್ಜೆ ಹಿಂದಕ್ಕೆ ಸರಿದುಹೋದಳು "ನನಗಾಗಿ ಬೆಳ್ಳಿಯ ಬೆಟ್ಟದಿಂದ ಓಡಿಬಂದೆಯಾ ತಾಯಿ!" ಎಂದು ಹೇಳುತ್ತ ಅವನು ಅಡ್ಡ ಬೀಳಲು ಪ್ರಯತ್ನಿಸಿದನು ದೇವಿಯು, "ಯಾರಿಗೆ ಯಾರೋ ಪುರಂದರ ವಿಠಲಾ ಅಂದೆ; ನಂಗೆ ನೀನು, ನಿಂಗೆ ನಾನು" ಎಂದು ಹೇಳಿ ಮೇಲಕ್ಕೆಬ್ಬಿಸಿದಳು ಬೋರಯ್ಯನು ದಿಟ್ಟಿಸಿ ನೋಡಿದನು ತನ್ನನ್ನು ಮೇಲಕ್ಕೆಬ್ಬಿಸಿದವಳು ನೀಲಮ್ಮ 'ಜರತಾರಿಯ ಮುದ್ದೆ' ಯಾಗಿದ್ದ ತಿಳಿಹಸುರು ಬಣ್ಣದ ಸೀರೆಯನ್ನುಟ್ಟು ಮಲ್ಲಿಗೆಯ ಹೂವನ್ನು ಮುಡಿದು ನೀಲಮ್ಮನು ನಿಂತಿದ್ದಾಳೆ ಪ್ರೇಮ ರಸವೇ ಅವಳ ಮುಖಮಂಡಲದಿಂದ ಉಕ್ಕಿ ಹರಿಯುತ್ತಿದೆ ಈ ದೃಶ್ಯವನ್ನು ನೋಡಿ ಬೋರಯ್ಯನು ಬೆರಗಾಗಿ ಹೋದನು ಕೂಡಲೆ ಅವನು, "ನೀಲಿ, ನೀಲಿ, ನೀನು ಬಹಳ ಹೆಚ್ಚಿ ಹೋದೆ" ಎಂದನು "ದೊಡ್ಡವರ ಕೈಹಿಡಿದೋಳು ಹೆಚ್ಚಿಹೋಗೋದೆ! ನಂಗೇನು ಮಾನ ಮರ್ಯಾದೆ ಹೆಚ್ಚಿಲ್ಲವೇನು? ಗಂಡನ ಗೌರವದಾಗೆ ಹೆಂಡತೀಗೂ ಅರ್ಧ" ಎಂದು ನೀಲಮ್ಮನು ಉತ್ತರವಿತ್ತಳು ಬೋರಯ್ಯನ ಮುಖದ ಮೇಲೆ ನೀರನ್ನೆರಚಿದವಳು ಅವಳೇ.

ಆ ಬಳಿಕ ಸೀರೆಯು ಹೇಗೆ ಬಂದಿತೆಂಬ ವಿಚಾರಣೆ ನಡೆಯಿತು ಬೋರಯ್ಯನ ಕಳವಿನ ಕಥೆಗೆ ಕಾರಣವನ್ನು ಕೇಳಿ, ಅದು ನಿಜವೋ ಸುಳ್ಳೋ ಎಂಬುದನ್ನು ತಿಳಿದುಬರಲು ರಾಣೀವಾಸದವರು ಅವ್ವೆಯರನ್ನು ಕಳುಹಿಸಿದ್ದುದು, ಅವ್ವೆಯರು ಅರಮನೆಗೆ ಹಿಂದಿರುಗಿ ಹೋಗಿ ಸ್ವಲ್ಪ

ಹೊತ್ತಿನಲ್ಲೇ ಸೀರೆ ಕುಪ್ಪಸಗಳನ್ನೂ ಒಂದು ವಜ್ರದ ಉಂಗುರವನ್ನೂ ಮಂಗಳದ್ರವ್ಯಗಳನ್ನೂ, ಮಹಾರಾಜರ ಮತ್ತು ಮಹಾರಾಣಿಯವರ ಆಶೀರ್ವಾದದೊಡನೆ ತಂದುಕೊಟ್ಟು ಹೊರಟುಹೋದುದು, ಇವೇ ಮುಂತಾದ ವಿಚಾರಗಳನ್ನು ವಿಶದವಾಗಿ ನೀಲಮ್ಮನು ತಿಳಿಸಿದಳು ಬೋರಯ್ಯನು ಬೇಲೂರು ದೇವಸ್ಥಾನದ ಪ್ರಾಕಾರದಲ್ಲಿ ಕೆತ್ತಿರುವ ಕಲ್ಲಿನ ಬೊಂಬೆಯಂತೆ ನಿಂತಿದ್ದನು ನೀಲಮ್ಮನು ಹೇಳಿದ ಕಥೆಯು, ಯಾರೋ ಸ್ವಪ್ನದಲ್ಲಿ ಹೇಳಿದಂತೆ ಅವನಿಗೆ ತೋರಿತು ಕೊನೆಗೆ ಅವನು ಅವಳ ಬೆರಳಿನಲ್ಲಿದ್ದ ವಜ್ರದುಂಗುರವನ್ನು ನೋಡಿ, ಅವಳ ಕೈಬೆರಳನ್ನು ತಿರುಗಿಸಿ ತಿರುಗಿಸಿ, ಯಂತ್ರದ ಬೊಂಬೆಯಂತೆ, "ಹಂಗಾದರೆ, ಇದೆಲ್ಲಾ ದೊರೆಗಳ ಕಡೆಯಿಂದ ಬಂದದ್ದಾ?" ಎಂದನು ನೀಲಮ್ಮನು ಮುಖವನ್ನು ಉರುಕಿಸಿ, "ಇನ್ನೂ ದೊರೆ ದೊರೆ ಅನ್ನೋದೆ? ದೊರೆಯಲ್ಲ, ದೇವರು" ಎಂದಳು. ಬೋರಯ್ಯನು, "ನಿಜ, ನಿಜ! ಅವರು ದೊರೆಯಲ್ಲ, ದೇವರು ನೀನು ನನಗೆ ಸಂಜೇಲೇ ಇದೆಲ್ಲಾ ಹೇಳದೆ ಇದ್ದದ್ದೇಕೆ?" ಎಂದನು ನೀಲಮ್ಮನು ಮನೋಹರವಾಗಿ ಕೊರಳನ್ನು ಕೊಂಕಿಸಿ, "ಕೆಂಡದ ಮಳೆ ಬೀಳೋವಾಗ ಸುಗಂಧರಾಜನ ಹುವ್ವ ಆಚೆಗೆ ಎರಚೋದು ಹೆಂಗೆ?" ಎಂದಳು ಕಳ್ಳನಿಗೆ ಚೇಳು ಬಡಿದಂತಾಯಿತು

ಬೆಳಗಾಯಿತು, ಏನಾದರೂ ಶಿಕ್ಷೆಯಾಗುವುದೋ ಏನೋ ಎಂದು ಬೋರಯ್ಯನಿಗೆ ಸ್ವಲ್ಪ ಕಳವಳ, ಆದರೂ ಶಿಕ್ಷೆಯಾಗದೆ ಇರಬಹುದೆಂದೂ ಒಂದು ಬಗೆಯ ಧೈರ್ಯ ಅವನು ಬಕ್ಷಿಯವರ ಮನೆಗೆ ಹೋಗಿ ಅವರೊಡನೆ ಮಾತನಾಡಿ ಅವರಿಗೆ ಅಡ್ಡಬಿದ್ದು ಆ ಬಳಿಕ ಸರಸರನೆ ಮನೆಗೆ ಬಂದನು, ಒಡನೆಯೇ ನೀಲಮ್ಮನ ಬಳಿಗೆ ಹೋಗಿ, "ನೀಲಿ, ನೀಲಿ! ನೀನು ಹೇಳಿದ್ದು ನಿಜ ಮಹಾಸ್ವಾಮಿಯೋರು ದೊರೆಯಲ್ಲ, ದೇವರು, ಅವರು ನಿಜವಾಗಿಯೂ ದೇವರು. ನನಗೆ ಸಂಬಳ ಹೆಚ್ಚಾಗ್ಯೆತೆ" ಎಂದು ಹೇಳಿದನು ನೀಲಮ್ಮನು ತೃಪ್ತಿ ಸಂತೋಷಗಳಿಂದ ಕೂಡಿದ ಮಂದಹಾಸವನ್ನು ಬೀರಿದಳು

"ಚಿರಮಭಿವರ್ಧತಾಂ ಯದುಸಂತಾನ ಶ್ರೀಃ" ಎಂಬುದೇ ಸಂಧ್ಯಾ ವಂದನೆಯಾದ ಮೇಲೆ ನಾನು ಭಗವಂತನನ್ನು ಬೇಡಿಕೊಳ್ಳುತ್ತಿರು ಶ್ರೇಯಃಪ್ರಾರ್ಥನೆ ಅದು ಯಾರ ಕವನವೋ ಏನೋ ? ಅಂತು, ಅದ ಸೊಗಸಾದ ಶ್ರೇಯಃಪ್ರಾರ್ಥನೆ

—ಕೃಷ್ಣಪ್ಪ

